# ಚಂಚಲ

(ಶರತ್ ಕಿರುಕಾದಂಬರಿ)

★

— ಅನುವಾದಕರು —

'ಮಧ್ವೇಶ'

★

— ಪ್ರಕಾಶಕರು —

ಹೆಚ್. ಕೆ. ವೇದವ್ಯಾಸಾಚಾರ್, ಎಂ.ಎ.

ಕಾರ್ಯದರ್ಶಿ

ಶ್ರೀ ಪರಿಮಳ ಪ್ರಕಟನಾಲಯ

ನಂಜನಗೂಡು

೧೯೪೭

# ಚಂಚಲ

★

ಕೆಸರಿನಲ್ಲಿ [illegible] ತನ್ನದೇ ಆದ ಶಕ್ತಿಯಿಂದ ಕೆಸರನ್ನೆ ಭೇದಿಸಿಕೊಂಡು ಕೆರೆಯ[illegible] ತಲೆಯೆತ್ತಿ ಪ್ರಕೃತಿ ಸೌಂದರ್ಯಕ್ಕೇ ಇಂಪೆರೆಯುವಂತಿರುವ ತಾ[illegible] ಸಾದೃಶ್ಯ ಹೃದಯಂಗಮವಾಗಿದೆ ...............ಸೃಷ್ಟಿ ನಿಯಮಾನುಸಾರ ಕಲಂಕಪ್ರವಾಹವೊಂದರಲ್ಲಿ ಜನ್ಮತಾಳಿ ಹುಲ್ಲುಕಡ್ಡಿಯಂತೆ ಹಿಂಧುಮುಂದಿನ ಪರಿವೆಯಿಲ್ಲದೆ ಕೊಚ್ಚಿಹೋಗುತ್ತಾ ಸಮಾಜದ ಕಣ್ಣೆದುರು ಕೀಳಾಗಿರುವ ವ್ಯಕ್ತಿ ಬಂಡೆಯಂತೊದಗಿಬರುವ ಸನ್ನಿವೇಶವೊಂದನ್ನು ತನ್ನದೇ ಆದ ಆತ್ಮ ಶಕ್ತಿಯಿಂದ ಆಶ್ರಯಿಸಿ ತುಂಬು ಪಶ್ಚಾತ್ತಾಪದಿಂದ ತನ್ನ ಹೇಯ ಜೀವನವನ್ನಳಿದು ಹೊಸತೊಂದು ಜೀವನೋದ್ಯಾನದಲ್ಲಿ ತಲೆಯೆತ್ತ ಲೆಸಗಿದಾಗ ಸಮಾಜ ತನ್ನ ದಡಕ್ಕೆ ಈ ವ್ಯಕ್ತಿಯನ್ನು ಬರಮಾಡಿ ಕೊಳ್ಳುವುದೆ? ಇಂತಹ ವ್ಯಕ್ತಿ ತನ್ನ ಜೀವನವನ್ನು ಮೇಲ್ಮಾಡಿ ಕೊಳ್ಳುವ ಬಯಕೆ ಬಗೆಹರಿದೀತೆ? ಮಾನವ ಹೃದಯವನ್ನೇ ಕರಗಿಸು ವಂತಿರುವ ಈ ವಿಶಾಲ ಸಮಸ್ಯೆಯ ಅಂತರಂಗವನ್ನು ಈ ಕಿರುಕಾದಂ ಬರಿಯಲ್ಲಿ ಶರಚ್ಚಂದ್ರರು ತಮ್ಮ ಹೃದಯದಂತರಾಲದಿಂದ ಕಡೆದು ನಮ್ಮ ಮುಂದಿಟ್ಟಿದ್ದಾರೆ. ಈ ಕಿರುಕಾದಂಬರಿ ಓದುಗರನ್ನು ವಿಚಾರ ಪರವಶರನ್ನಾಗಿ ಮಾಡುವುದರಲ್ಲಿ ಏನೂ ಸಂದೇಹವಿಲ್ಲ.

★

ಶ ರ ತ್.

# ಚಂಚಲ

## ೧

ಸತ್ಯೇಂದ್ರ ದೊಡ್ಡ ಜಮೀನುದಾರಿಯ ಯಜಮಾನ. ವಿಶ್ವವಿದ್ಯಾನಿಲಯದಲ್ಲಿ ಓದುತ್ತಿದ್ದ. ರಜೆಯಾದ್ದರಿಂದ ಅದೇ ತನ್ನ ಊರಿಗೆ ಹಿಂತಿರುಗಿದ್ದ. ಅವನ ತಾಯಿ "ಮಗು ಹುಡುಗಿ ರತಿಯಂತಿದ್ದಾಳೆ. ನನ್ನ ಮಾತು ಕೇಳು. ನಿನ್ನ ಕಣ್ಣಿನಿಂದಲೇ ಒಂದುಬಾರಿ ಅವಳನ್ನು ನೋಡಿ ಬಾ" ಎಂದು ಒತ್ತಾಯದ ರಾಗ ಎಳೆದಳು.

ಸತ್ಯೇಂದ್ರ ತಲೆ ಅಲ್ಲಾಡಿಸುತ್ತಾ "ಆಗುವುದಿಲ್ಲಮ್ಮಾ, ಈಗಲೇ ನನ್ನಿಂದ ಇದಾಗದು. ನಾನು ಪರೀಕ್ಷೆಯಲ್ಲಿ ಉತ್ತೀರ್ಣನಾಗಬೇಡವೇ?" ಎಂದು ನೆಪಹೇಳಲೆತ್ನಿಸಿದ.

"ಏಕಾಗಬಾರದು? ಉತ್ತೀರ್ಣನಾಗೇ ಆಗುವಿ. ಸೊಸೆ ಇರುವುದು ಇಲ್ಲಿ, ನನ್ನ ಹತ್ತಿರ. ನೀನು ಓದುವುದು ಕಲಕತ್ತೆಯಲ್ಲಿ. ಹೀಗಿರುವಾಗ ನಿನ್ನ ಓದಿಗೆ ಏನು ತೊಂದರೆಯಾಗುವುದೋ ನನಗೆ ಬೇರೆ ಗೊತ್ತಾಗುವುದಿಲ್ಲ."

"ಇಲ್ಲಮ್ಮಾ, ಅದು ಆಗದ ಮಾತು. ನನಗೀಗ ಅವಕಾಶವಿಲ್ಲ" ಎಂದು ಹೇಳಿ ಸತ್ಯೇಂದ್ರ ಹೊರಹೊರಡಲನುವಾದ.

"ಹೋಗಬೇಡ, ಸ್ವಲ್ಪ ನಿಲ್ಲು........ಇನ್ನೊಂದು ಮಾತು ನಿನ್ನೊಡನೆ ಹೇಳಬೇಕು..... ಮಗು! ಅವರಿಗೆ ನಾನು ಮಾತುಕೊಟ್ಟುಬಿಟ್ಟಿದ್ದೇನೆ. ನನ್ನ ಮಾತನ್ನುಳಿಸಲಾರೆಯಾ?"

ಹೋಗುತ್ತಿದ್ದ ಸತ್ಯೇಂದ್ರ ತಾಯಿಯ ಮಾತುಗಳಿಗೆ ಸೆರೆಬಿದ್ದು ಅಲ್ಲಿಯೇ ನಿಂತ. ಅವನ ಮುಖದಲ್ಲಿ ಬೇಜಾರು ಎದ್ದು ಕಾಣುತ್ತಿತ್ತು. 'ನನ್ನನ್ನು ಕೇಳದೇ ಮಾತು ಕೊಡೆಂದು ನಿನಗೆ ಹೇಳಿದವರಾರು?" ಎಂದು ತಾಯಿಯನ್ನೇ ದಿಟ್ಟಿಸಿ ಕೇಳಿದ.

ಸತ್ಯೇಂದ್ರನ ಪ್ರಶ್ನೆ ತಾಯಿಯನ್ನು ಬಹಳ ಕಷ್ಟಕ್ಕೀಡುಮಾಡಿತು. 'ನನ್ನದು ತಪ್ಪಾಯಿತು ಸತ್ಯೇಂದ್ರ, ಆದರೆ ನೀನು ನಿನ್ನ ತಾಯಿಯ

ಮಾತನ್ನು ಳಿಸುವೆಯಲ್ಲವೇ? ನೀನು ಉಳಿಸಲೇಬೇಕು. ಇದಲ್ಲದೆ ವಿಧವೆಯ ಮಗಳಾದ ಆ ಹುಡುಗಿ ಬಹಳ ಕಷ್ಟಪಡುತ್ತಿದ್ದಾಳೆ. ನನ್ನ ಮಾತನ್ನು ಕೇಳು, ಈ ಸಂಬಂಧಕ್ಕೆ ಒಪ್ಪಿಕೊ.''

"ಒಳ್ಳೆಯದು, ಯೋಚಿಸುತ್ತೇನೆ" ಎಂದವನೇ ಸತ್ಯೇಂದ್ರ ಹೊರ ಹೊರಟ. ಬಹಳ ಹೊತ್ತಿನವರೆಗೆ ತಾಯಿ ದಿಕ್ಕು ತೋಚದೆ ಅಲ್ಲೇ ನಿಂತಿದ್ದಳು. ಅವಳಿಗೆ ಸತ್ಯೇಂದ್ರ ಒಬ್ಬನೇ ಮಗ. ಪಾಪ! ಆಕೆಯ ಗಂಡ ಆಗಲೇ ತೀರಿಹೋಗಿ ಏಳೆಂಟು ವರ್ಷಗಳು ಕಳೆದುಹೋಗಿದ್ದವು. ಅಂದಿನಿಂದಲೂ ಆವಳು ಗುಮಾಸ್ತರ ಮತ್ತು ಸೇವಕರ ಸಹಾಯದಿಂದ ತನ್ನ ದೊಡ್ಡ ಜಮೀನುದಾರಿಯನ್ನು ನಡೆಸುತ್ತಿದ್ದಳು. ಸತ್ಯೇಂದ್ರ ಕಲಕತ್ತೆಯ ಪ್ರೌಢ ಶಾಲೆಯಲ್ಲಿ ಓದುತ್ತಿದ್ದ. ಅವನಿಗೆ ತನ್ನ ಜಮೀನುದಾರಿಯ ವಿಷಯದಲ್ಲಿ ಯೋಚಿಸಬೇಕಾದ ಪ್ರಮೇಯವಿರಲಿಲ್ಲ. ತಾಯಿಯೇ ಎಲ್ಲವನ್ನೂ ನೋಡಿಕೊಳ್ಳುತ್ತಿದ್ದಳು. ಅವಳು ಮನಸ್ಸಿನಲ್ಲಿ "ನನ್ನ ಮಗ ದೊಡ್ಡವನಾಗಿ ಪ್ರೌಢಶಿಕ್ಷಣವನ್ನು ಹೊಂದಿದಮೇಲೆ ಅವನಿಗೆ ಮದುವೆ ಮಾಡುತ್ತೇನೆ. ಸೊಸೆ ಮನೆಗೆ ಬರುತ್ತಾಳೆ. ಆವರಿಬ್ಬರಮೇಲೆ ಜಮೀನುದಾರಿಯ ಜವಾಬ್ದಾರಿ ಹೊರಿಸಿ ನಾನು ನಿಶ್ಚಿಂತಳಾಗಿರುವೆ.'' ಎಂದು ಆಗಾಗ ಯೋಚಿಸುತ್ತಿದ್ದಳು. ಮಗನನ್ನು ಮನೆಯ ಕಷ್ಟಗಳಿಗೊಳಗುಮಾಡಿ ಅವನ ಪ್ರೌಢ ಶಿಕ್ಷಣಕ್ಕೆ ತಡೆಮಾಡಬಾರದೆಂದು ಎಲ್ಲ ಜವಾಬ್ದಾರಿಯನ್ನೂ ತಾನೇ ಹೊತ್ತಿದ್ದಳು.

* * * * *

ಅಂದು ಕೇವಲ ವ್ರತವೆಂಬ ನಿಮಿತ್ತದಿಂದ ಊರಿನವರಿಗೆಲ್ಲಾ ತಮ್ಮ ಮನೆಗೆ ಭೋಜನಕ್ಕೆ ಬರಬೇಕೆಂದು ಸತ್ಯೇಂದ್ರನ ತಾಯಿ ಆಹ್ವಾನಿಸಿದ್ದಳು. ಸ್ವರ್ಗೀಯ ಅತುಲಚಂದ್ರನ ಹೆಂಡತಿಯೂ ತನ್ನ ಹನ್ನೆರಡು ವರ್ಷದ ಮಗಳೊಡನೆ ಬಂದಿದ್ದಳು. ಆವಳ ವೇಷಭೂಷಣಗಳಿಂದಲೇ ದರಿದ್ರಳೆಂದು ಕಾಣುತ್ತಿತ್ತು. ಆದರೂ ಆ ಹನ್ನೆರಡು ವರ್ಷದ ಹುಡುಗಿಯ ಸ್ವಾಭಾವಿಕ ಸೌಂದರ್ಯ ನೋಡಿ ಸತ್ಯೇಂದ್ರನ ತಾಯಿ ಮನಸ್ಸಿನಲ್ಲೇ ಮೆಚ್ಚಿದಳು. ಆ ಹುಡುಗಿಯೊಡನೆ ನಾಲ್ಕಾರು ಮಾತುಗಳನ್ನಾಡುವುದರಿಂದಲೇ

ಅವಳು ಕೇವಲ ಸುಂದರಿ ಅಷ್ಟೇ ಅಲ್ಲ, ಅಶೇಷ ಗುಣವತಿ ಎಂದು ತಿಳಿದುಕೊಂಡಳು. ಆ ಕ್ಷಣವೇ ತನ್ನ ಮನಸ್ಸಿನಲ್ಲಿ "ಒಂದುಬಾರಿ ಸತ್ಯೇಂದ್ರ ಇವಳನ್ನು ನೋಡಲಿ, ಅವನು ಹೇಗೆ ಒಪ್ಪುವುದಿಲ್ಲವೋ ನಾನು ನೋಡುತ್ತೇನೆ" ಎಂದುಕೊಂಡಳು.

* * * * *

ಮಾರನೆಯ ದಿನ ಸಂಜೆಯ ಮುನ್ನ ಉಪಹಾರಕ್ಕಾಗಿ ತನ್ನ ತಾಯಿಯ ಕೊಠಡಿಯನ್ನು ಸತ್ಯೇಂದ್ರ ಪ್ರವೇಶಿಸುತ್ತಿದ್ದಂತೆಯೇ ಆಭರಣಗಳಿಂದಲಂಕೃತಳಾದ ರೂಪವತಿ ಹುಡುಗಿಯೊಬ್ಬಳು ಸರಿಯಾಗಿ ತನ್ನ ಉಪಹಾರದ ತಟ್ಟೆಗೆದುರಾಗಿ ಕುಳಿತಿದ್ದುದನ್ನು ನೋಡಿದ.

"ಬಾ, ಉಪಹಾರವನ್ನು ತೆಗೆದುಕೋ."

ತಾಯಿಯ ಮಾತುಗಳಿಂದ ಸತ್ಯೇಂದ್ರ ನಿದ್ದೆಯಿಂದೆಚ್ಚೆತ್ತವನಂತೆ ಗಾಬರಿಯಿಂದ "ಇಲ್ಲೇಕಮ್ಮಾ, ನಾನು ಇನ್ನೆಲ್ಲಾದರೂ ಕುಳಿತುಕೊಂಡು ತಿನ್ನುತ್ತೇನೆ" ಎಂದ.

ತಾಯಿ ನಗುತ್ತಾ "ನೀನೇನು ನಿಜವಾಗಿ ಮದುವೆ ಮಾಡಿಕೊಳ್ಳುತ್ತಿಲ್ಲ. ಅಲ್ಲದೇ ಇಷ್ಟು ಸಣ್ಣ ಹುಡುಗಿಯ ಎದುರಿನಲ್ಲಿ ಸಂಕೋಚವೆಂತಹದು?" ಎಂದಳು.

ಬೇರೆ ದಾರಿಯಿಲ್ಲದೆ ಸತ್ಯೇಂದ್ರ "ನಾನೇನೂ ಸಂಕೋಚಪಟ್ಟುಕೊಳ್ಳುತ್ತಿಲ್ಲಾ" ಎನ್ನುತ್ತಾ ತನಗಾಗಿ ಹಾಕಿದ್ದ ಮಣೆಯಮೇಲೆ ಕುಳಿತ. ಹುಡುಗಿ ಸರಿಯಾಗಿ ಎದುರಿಗೆ ಕುಳಿತಿದ್ದಳು. ಇಷ್ಟರಲ್ಲಿ ತಾಯಿ ಕೆಲಸವಿರುವಂತೆ ಹೊರಕ್ಕೆ ಹೊರಟುಹೋದಳು. ಉಳಿದವರು ಸತ್ಯೇಂದ್ರ ಮತ್ತು ಆ ಹುಡುಗಿ. ಸತ್ಯೇಂದ್ರ ಕೆಲನಿಮಿಷಗಳಲ್ಲಿಯೇ ಬೇಗಬೇಗ ನಾಲ್ಕು ತುತ್ತುಗಳನ್ನು ಅಡಚಿಕೊಂಡು ಉಪಹಾರವನ್ನು ಮುಗಿಸಿದ. ಕೈ ತೊಳೆದು ತನ್ನ ಕೊಠಡಿಗೆ ಬರುವುದರಲ್ಲಿಯೇ ಕೊಠಡಿಯ ತುಂಬ ಮಿತ್ರರಿರುವುದನ್ನು ನೋಡಿ ಅವನಿಗೆ ಆಶ್ಚರ್ಯವಾಯಿತು. ಸತ್ಯೇಂದ್ರನನ್ನು ನೋಡಿದೊಡನೆಯೇ ಎಲ್ಲರೂ ಅವನನ್ನು ಹುರುಪಿನಿಂದ ಆಹ್ವಾನಿಸಿದರು. "ನನಗೆ ಹುಷಾರಿಲ್ಲ, ತಲೆ ಬಹಳ ನೋಯುತ್ತಿದೆ" ಎಂದು ಕುಂಟು

ಕಾರಣ ಹೇಳಿ ಸತ್ಯೇಂದ್ರ ತಪ್ಪಿಸಿಕೊಂಡು ಬೇರೊಂದು ಕೋಣೆಗೆ ಹೋಗಿ ಆರಾಮವಾಗಿ ಹಾಸಿಗೆಗೊರಗಿದ.*

ಮಿತ್ರರಿಗೆ ಸತ್ಯೇಂದ್ರ ಹೊರಟುಹೋದುದು ಬಹಳ ಆಶ್ಚರ್ಯವಾಯಿತು. ಚದುರಂಗವನ್ನಾಡಲು ಆರಂಭಿಸಿದರು. ನಾಲ್ಕಾರು ಆಟಗಳಾದವು. ಪರಿಹಾಸಗಳಿಗೆ ಮೇರೆಯೇ ಇಲ್ಲ. ಸಾಯಂಕಾಲವೂ ಆಯಿತು. ಇಷ್ಟಾದರೂ ಸತ್ಯೇಂದ್ರ ತನ್ನ ಜಾಗವನ್ನು ಬಿಟ್ಟು ಕದಲಲಿಲ್ಲ. "ಯಾರು ಗೆದ್ದರು, ಯಾರು ಸೋತರು" ಎಂದು ಒಬ್ಬರನ್ನೂ ವಿಚಾರಿಸಲಿಲ್ಲ. ಮಿತ್ರರೆಲ್ಲರೂ ಹೊರಟುಹೋದರು. ಬದುಕಿದೆನೆಂದು ಅಲ್ಲಿಂದೆದ್ದು ತನ್ನ ಮಲಗುವ ಕೋಣೆಯಕಡೆಗೆ ಸತ್ಯೇಂದ್ರ ಹೋಗುತ್ತಿದ್ದ.

"ಇಂದೇನು ಇಷ್ಟು ಬೇಗ ಮಲಗಲು ಹೋಗುತ್ತಿದ್ದೀ?"

"ಮಲಗಲು ಹೋಗುವುದಿಲ್ಲ. ಓದುವುದಕ್ಕಾಗಿ ಹೋಗುತ್ತಿದ್ದೇನೆ. ಎಂ.ಎ. ಪರೀಕ್ಷೆ ಎಂದರೆ ಸಾಮಾನ್ಯವೇ? ವ್ಯರ್ಥವಾಗಿ ಕಾಲ ಕಳೆಯಲು ಸಾಧ್ಯವಾಗುವುದೇ?" ಇಷ್ಟು ಹೇಳಿದವನೇ ಧಮ್, ಧಮ್ ಎಂದು ಶಬ್ದ ಮಾಡುತ್ತಾ ಮಹಡಿಯ ಮೇಲಕ್ಕೆ ಹೋದ.

ಅರ್ಧ ಗಂಟೆ ಕಳೆದಿದ್ದರೂ ಒಂದು ಪುಟ ಕೂಡ ಅವನಿಂದ ಓದಲಾಗಲಿಲ್ಲ. ಮೇಜಿನ ಮೇಲೆ ಪುಸ್ತಕವಿತ್ತು. ಅವನ ದೃಷ್ಟಿ ಮಾತ್ರ ತಾರಸಿಯ ಜಂತೆಗಳನ್ನು ಎಣಿಸುವುದರಲ್ಲಿತ್ತು. ಇದ್ದಕ್ಕಿದ್ದಂತೆಯೇ ಅವನ ಧ್ಯಾನವು ಭಗ್ನವಾಯಿತು. ಅಸ್ಪಷ್ಟವಾದ ಶಬ್ದವೊಂದು ಕೇಳಿದಂತಾಯಿತು. ಆಲಿಸಿ ಕೇಳಿದ; ಪುನಃ ಶಬ್ದ. "ಝುಮ್." ಅರೆಕ್ಷಣದ ಮೇಲೆ ಅದೇ ಶಬ್ದ. "ಝುಮ್, ಝುಮ್" ಸತ್ಯೇಂದ್ರ ಸರಿಯಾಗಿ ಎದ್ದು ಕುಳಿತ. ತಲೆಯಿಂದ ಕಾಲಿನವರೆಗೂ ಆಭರಣಗಳಿಂದಲಂಕೃತಳಾದ, ಲಕ್ಷ್ಮಿಯಂತಿರುವ, ಅದೇ

---

* ಬಂಗಾಲಿಗಳಲ್ಲಿ ಯಾರದಾದರೂ ವಿವಾಹವಾಗುವುದಿದ್ದಲ್ಲಿ ವಧುವನ್ನು ನೋಡಲು ವರನ ಮಿತ್ರರನೇಕರನ್ನು ಕರೆಯುವುದು ವಾಡಿಕೆ. ಈ ಸಮಯದಲ್ಲಿ ವರನು ವಿಶೇಷವಾಗಿ ಮಿತ್ರರ ಪರಿಹಾಸಕ್ಕೆ ಒಳಗಾಗಬೇಕಾಗುತ್ತದೆ. ಮಿತ್ರರು ಇದೇ ಕಾರಣದಿಂದಲೇ ಬಂದಿರಬಹುದೆಂದು ಊಹಿಸಿ ಸತ್ಯೇಂದ್ರ ಕಾರಣವನ್ನು ಹೇಳಿ ತಪ್ಪಿಸಿಕೊಂಡ.

ಹುಡುಗಿ ದೂರದಲ್ಲಿ ಮೆಲ್ಲಮೆಲ್ಲಗೆ ಬರುತ್ತಿರವುದನ್ನು ನೋಡಿದ. ನೇರವಾಗಿ ಆ ಹುಡುಗಿ ಅವನ ಸಮೀಪಕ್ಕೆ ಬಂದು ನಿಂತುಕೊಂಡಳು. ಸತ್ಯೇಂದ್ರ ಅವಳನ್ನು ನೆಟ್ಟ ದೃಷ್ಟಿಯಿಂದ ನೋಡತೊಡಗಿದ. ಹುಡುಗಿ ಬಹಳ ಕೋಮಲ ಸ್ವರದಲ್ಲಿ ಹೇಳಿದಳು. " ತಾಯಿ ' ಸಮ್ಮತಿಯಿದೆಯೇ? ತಿಳಿದು ಬಾ ' ಎಂದು ಕಳುಹಿಸಿದ್ದಾರೆ" ಎಂದು.

ಸ್ವಲ್ಪಕಾಲ ಮೌನವಾಗಿದ್ದು ಸತ್ಯೇಂದ್ರ ಕೇಳಿದ. "ಯಾರ ತಾಯಿ?"

ಹುಡುಗಿಯು ಹೇಳಿತು. " ನನ್ನ ತಾಯಿ.''

ಇನ್ನೇನು ಹೇಳಬೇಕೆಂದು ಹುಡುಕಿದರೂ ಸತ್ಯನಿಗೆ ಉತ್ತರ ಸಿಗ ಲಿಲ್ಲ. " ನನ್ನ ತಾಯಿಯನ್ನು ಕೇಳು. ಅವರಿಂದಲೇ ನಿನಗೆ ಗೊತ್ತಾಗು ವುದು " ಎಂದು ಕಡೆಯಲ್ಲಿ ಹೇಳಿದ.

ಹುಡುಗಿ ಹೊರಟುಹೋಗುತ್ತಿದ್ದಳು. ಇದ್ದಕ್ಕಿದ್ದಂತೆಯೇ ಸತ್ಯೇಂದ್ರ ಕೇಳಿದ. " ನಿನ್ನ ಹೆಸರೇನು?"

" ರಾಧಾರಾಣೀ '' ಎಂದು ಹೇಳಿ ಹುಡುಗಿ ಹೊರಟುಹೋದಳು.

೨

ಎಂ.ಎ. ಪರೀಕ್ಷೆಗಾಗಿ ಓದಲು ಸತ್ಯೇಂದ್ರ ಕಲಕತ್ತೆಗೆ ಪುನಃ ಬಂದ. ಅವನಿಗೆ ಮದುವೆ ಮುಂದುಹಾಕಿ ಬರುವುದು ಬಹಳ ಪ್ರಯಾಸ ವಾಯಿತು. " ವಿಶ್ವವಿದ್ಯಾನಿಲಯದ ಎಲ್ಲಾ ಪರೀಕ್ಷೆಗಳನ್ನೂ ಪಾಸು ಮಾಡುವವರೆಗೆ ವಿವಾಹವಾಗುವುದಿಲ್ಲ. ಸಾಧ್ಯವಾದರೆ ಆಮೇಲೂ ಸಹ ವಿವಾಹ ಮಾಡಿಕೊಳ್ಳುವುದಿಲ್ಲ. ಮದುವೆ ಮಾಡಿ ಕೊಳ್ಳುವುದರಿಂದ ಆತ್ಮಸಮ್ಮಾನ ನಷ್ಟವಾಗುತ್ತದೆ" ಎಂದು ನಿಶ್ಚಯಿಸಿದ್ದ. ಆದರೂ ಸಹ ಇದ್ದಕ್ಕಿದ್ದಂತೆ ಅವನ ಮನಸ್ಸಿನಲ್ಲಿ ಏನಾಗು ತ್ತಿತ್ತೋ ಏನೋ? ಯಾರಾದರೂ ಯುವತಿಯರನ್ನು ಕಂಡರೆ ಅವರ ಜೊತೆ ಯಲ್ಲಿಯೇ ಇನ್ನೊಂದು ಸಣ್ಣ ಮುಖ ಆ ಯುವತಿಯನ್ನೆಲ್ಲಾ ಭೇದಿಸಿ ಕೊಂಡು ತಾನೇ ತಾನಾಗಿ ವಿರಾಜಿಸುತ್ತಿರುವಂತ ಭಾಸವಾಗುತ್ತಿತ್ತು. ಅವನಿಂದ ಹೇಗೂ ರಾಧಾರಾಣಿಯನ್ನು ಮರೆಯಲಾಗಲಿಲ್ಲ. ಅವನು

ಯಾವಾಗಲೂ ಸ್ತ್ರೀಯರಿಂದ ದೂರವಾಗಿರುತ್ತಿದ್ದ. ಆದರೆ ಈಗ ಮಾತ್ರ ರಸ್ತೆಯಲ್ಲಿ ಆಗಲೀ ಅಥವಾ ಇನ್ನೆಲ್ಲಾದರೂ ಆಗಲಿ ವಯಸ್ಕಳಾದ ಸ್ತ್ರೀಯನ್ನು ನೋಡಿದರೆ ಪುನಃ ಪುನಃ ನೋಡಬೇಕೆಂಬ ಆಸೆ ಅವನ ಮನಸ್ಸಿನಲ್ಲಿ ಮಿನುಗುತ್ತಿತ್ತು. ಅವನು ಎಷ್ಟೇ ಯತ್ನಿಸಿದರೂ ಆ ಸ್ತ್ರೀಯರಿಂದ ತನ್ನ ದೃಷ್ಟಿಯನ್ನು ಬೇರೆ ಕಡೆ ತಿರುಗಿಸಲಾರದವನಾಗುತ್ತಿದ್ದ.

ಸತ್ಯೇಂದ್ರನಿಗೆ ಈಜುವುದೆಂದರೆ ಪ್ರಾಣ. ಅವನಿದ್ದ ಮನೆಯಿಂದ ಗಂಗೆ ಬಹಳ ಹತ್ತಿರವಾಗಿದ್ದರಿಂದ ಪ್ರತಿದಿನವೂ ಜಗನ್ನಾಥ ಘಾಟಿಗೆ ಸ್ನಾನಕ್ಕಾಗಿ ಹೋಗುತ್ತಿದ್ದ.

ಅಂದು ಪೂರ್ಣಿಮಾ. ಘಾಟಿಯಲ್ಲಿ ಬಹಳ ಗಲಾಟೆಯಿತ್ತು. ನಿತ್ಯದಂತೆ ತನ್ನ ಒಣಗಿದ ಬಟ್ಟೆಗಳನ್ನು ಕೊಡಲು ಉಡಿಯಾ ಬ್ರಾಹ್ಮಣನ ಸಮೀಪಕ್ಕೆ ಹೋಗುತ್ತಿದ್ದಾಗ ಸ್ವಲ್ಪ ತಡೆಯುಂಟಾಗಿ ನಿಂತ. ನಾಲ್ಕಾರು ಜನರು ಒಂದೇಕಡೆ ನೋಡುತ್ತಿರುವುದು ಅವನ ಕಣ್ಣಿಗೆ ಬಿತ್ತು. ಸತ್ಯೇಂದ್ರ ಅವರ ದೃಷ್ಟಿಯನ್ನೇ ಅನುಸರಿಸಿ ಕೊನೆಗಂಡಾಗ ಆಶ್ಚರ್ಯದಿಂದ ಸ್ತಬ್ಧನಾಗಿ ನಿಂತುಬಿಟ್ಟ. ತಾನು ಇದುವರೆಗೂ ಸ್ತ್ರೀಯಲ್ಲಿ ಅಂತಹ ಸೌಂದರ್ಯವನ್ನು ಎಣಿಸಿರಲಿಲ್ಲ. ಅವಳ ವಯಸ್ಸು ಹದಿನೆಂಟು ಹತ್ತೊಂಬತ್ತು ಮೀರಿರಲಿಲ್ಲ. ಕರಿ ಅಂಚಿನ ಶುಭ್ರವಾದ ಸಾದಾ ಸೀರೆಯನ್ನುಟ್ಟಿದ್ದಳು. ಅವಳ ಮೈಮೇಲೆ ಹುಡುಕಿದರೂ ಒಂದು ಆಭರಣವಿರಲಿಲ್ಲ. ಅವಳು ತನಗೆ ಪರಿಚಿತನಾದ ಪಂಡನ ಹತ್ತಿರ ತನ್ನ ಹಣೆಯ ಮೇಲೆ ಗಂಧವನ್ನು ಹಚ್ಚಿಸಿಕೊಳ್ಳುತ್ತಿದ್ದಳು. ಪಂಡನೂ ಏಕಾಗ್ರಮನಸ್ಕನಾಗಿ ಆ ಲಾವಣ್ಯಮಯಿಗೆ ಚಂದನವನ್ನು ಹಚ್ಚುತ್ತಿದ್ದ.

ಸತ್ಯೇಂದ್ರ ಸಮೀಪಕ್ಕೆ ಹೋದ. ಪಂಡನಿಗೆ ಸತ್ಯೇಂದ್ರನಿಂದ ಯಥೇಷ್ಟವಾಗಿ ದಕ್ಷಿಣೆ ಸಿಗುತ್ತಿದ್ದಾಗ ಆ ರೂಪಸಿಗೆ ಚಂದನ ಹಚ್ಚುವುದನ್ನು ಬಿಟ್ಟು ಸತ್ಯೇಂದ್ರನಿಂದ ಒಣಗಿದ ಬಟ್ಟೆಗಳನ್ನು ತೆಗೆದುಕೊಳ್ಳಲು ಕೈಯನ್ನು ಮುಂದೆ ನೀಡಿದ.

ಸತ್ಯೇಂದ್ರನಿಗೆ ಎರಡಿದ್ದ ಕಣ್ಣುಗಳು ನಾಲ್ಕಾದವು. ಪಂಡನಿಗೆ ಬಟ್ಟೆಗಳನ್ನು ಕೊಟ್ಟು ಮೆಟ್ಟಲುಗಳನ್ನು ಇಳಿಯುತ್ತಾ ನೀರಿನ ಹತ್ತಿರ ಹೋದ.

ಇಂದು ಅವನು ಈಜಲಿಲ್ಲ. ಹೇಗೋ ಹಾಗೆ ಸ್ನಾನಮಾಡಿಕೊಂಡು ತನ್ನ ಬಟ್ಟೆಗಳಿಗಾಗಿ ಬೇಗ ಮೇಲಕ್ಕೆ ಬಂದ. ಆದರೆ ಅಷ್ಟರಲ್ಲಿಯೇ ಅವನ ಮನಸ್ಸನ್ನು ಸೆರೆಹಿಡಿದಿದ್ದ ರೂಪಸಿ ಹೊರಟುಹೋಗಿ ಬಹಳ ಹೊತ್ತಾಗಿತ್ತು. ನಿಟ್ಟುಸಿರೊಂದು ಸತ್ಯೇಂದ್ರನಿಂದ ಬೇರೆಯಾಯ್ತು.

ಅವತ್ತು ಪೂರ್ತಿ ಸತ್ಯನ ಮನಸ್ಸು "ಗಂಗಾ, ಗಂಗಾ" ಎಂದು ಜಪಿಸುತ್ತಿತ್ತು. ಮಾರನೆಯ ದಿನ ಬೆಳಕು ಹರಿಯುವ ಮುಂಚೆಯೇ ಎದ್ದು ಸತ್ಯೇಂದ್ರ ಗೂಟದ ಮೇಲಿದ್ದ ಪಂಚೆಯೊಂದನ್ನು ಹೆಗಲಿನಮೇಲೆ ಹಾಕಿಕೊಂಡು ಗಂಗಾನದಿಯ ಕಡೆಗೆ ಹೊರಟ. ತಲಪುತ್ತಿದ್ದಂತೆಯೇ ಆ ಅಪರಿಚಿತಳಾದ ಯುವತಿ ಆಗತಾನೇ ಸ್ನಾನಮಾಡಿ ಮೇಲಕ್ಕೆ ಬಂದಿರುವುದನ್ನು ನೋಡಿದ. ಸತ್ಯೇಂದ್ರ ಸ್ನಾನಮಾಡಿ ಪಂಡನ ಸಮೀಪಕ್ಕೆ ಹೋದಾಗ ಆ ರೂಪಸಿಯೂ ಹಿಂದಿನ ದಿನದಂತೆಯೇ ಅವನಿಂದ ಚಂದನವನ್ನು ಹಚ್ಚಿಸಿಕೊಳ್ಳುತ್ತಿದ್ದಳು. ಇಂದೂ ಅವರ ಕಣ್ಣುಗಳು ನಾಲ್ಕಾದವು. ಮೈಯಲ್ಲೆಲ್ಲಾ ವಿದ್ಯುತ್ಸಂಚಾರವಾದಂತಾಯಿತು. ಹೇಗೋ ಹಾಗೆ ಬೇಗ ಬಟ್ಟೆಗಳನ್ನು ಬದಲಾಯಿಸಿಕೊಂಡು ಸತ್ಯೇಂದ್ರ ಅಲ್ಲಿಂದ ಹೊರಟುಹೋದ.

೩

ಪ್ರತಿದಿನವೂ ಸ್ನಾನಕ್ಕಾಗಿ ಆ ಅಪರಿಚಿತ ರೂಪವತಿ ಬರುವಳೆಂಬುದನ್ನು ಸತ್ಯೇಂದ್ರ ತಿಳಿದ. ತಾನು ಸ್ನಾನಕ್ಕೆ ಪ್ರತಿದಿನವೂ ಹೊತ್ತಾಗಿ ಹೋಗುತ್ತಿದ್ದುದರಿಂದ ಆ ರೂಪಸಿಯು ಪ್ರತಿದಿನ ಬರುತ್ತಿದ್ದರೂ ಅವಳನ್ನು ಹಿಂದಾವಾಗಲೂ ಸಂಧಿಸಲಾಗಲಿಲ್ಲವೆಂದುಕೊಂಡ. ಏಳು ದಿನಗಳಿಂದಲೂ ಕೇವಲ ದೃಷ್ಟಿಗಳಲ್ಲಿ ಸಂಭಾಷಣೆಯಾಯಿತೇ ಹೊರತು, ನಾಲಿಗೆ ಬಿಚ್ಚಿ ಒಬ್ಬರಿಗೊಬ್ಬರು ಮಾತಾಡಲಿಲ್ಲ. ಕಣ್ಣುಗಳೇ ಮಾತನಾಡಿಕೊಳ್ಳುತ್ತಿರುವಾಗ ನಾಲಿಗೆ ಸೋತಂತೆಯೇ ಸರಿ. "ಆ ಅಪರಿಚಿತಳಾದ ರೂಪಸಿ ಯಾರೇ ಆಗಿರಲಿ, ಕಣ್ಣುಗಳಿಂದ ಮಾತನಾಡುವುದನ್ನು ಮಾತ್ರ ಬಹಳ ಚೆನ್ನಾಗಿ ಅಭ್ಯಾಸಮಾಡಿರುತ್ತಾಳೆ. 'ಪಾರದರ್ಶಿನಿ' ಎಂದೂ ಎನಬಹುದು" ಎಂದಿತು ಸತ್ಯೇಂದ್ರನ ಅಂತರ್ನಿಗೂಢ ಮನಸ್ಸು.

ಅಂದು ಸ್ನಾನ ಮಾಡಿ ಅನ್ಯಮನಸ್ಕನಾಗಿ ಮನೆಗೆ ಹಿಂತಿರುಗುತ್ತಿದ್ದಾಗ ಅಕಸ್ಮಾತ್ತಾಗಿ ಅವನ ಕಿವಿಯಲ್ಲಿ "ಸ್ವಲ್ಪ ಕೇಳಿರಿ'' ಎಂಬ ಶಬ್ದ ಶಂತಿಯಂತೆ ಮಿಡಿಯಿತು. ತಲೆಯೆತ್ತಿ ನೋಡಿದ. ರೈಲ್ವೆ ಲೈನಿನ ಆಚೆ ಅದೇ ರಮಣಿ ನಿಂತಿದ್ದಳು. ಸೊಂಟದಲ್ಲಿ ನೀರಿನಿಂದ ತುಂಬಿದ ಕೊಡ, ಬಲಗೈಯಲ್ಲಿ ಒದ್ದೆಯಾದ ಸೀರೆ ಇತ್ತು. ಅವಳು ಸನ್ನೆ ಮಾಡಿ ಸತ್ಯೇಂದ್ರನನ್ನು ತನ್ನೆಡೆಗೆ ಬರುವಂತೆ ಕೂಗಿದಳು. ಅಕ್ಕಪಕ್ಕಗಳಲ್ಲಿ ನೋಡಿ ಸತ್ಯ ಅವಳ ಸಮೀಪಕ್ಕೆ ಹೋದ. ಸತ್ಯೇಂದ್ರನನ್ನೇ ಕುತೂಹಲ ದೃಷ್ಟಿಯಿಂದ ನೋಡಿ ಕೋಮಲ ಕಂಠದಿಂದ ಅವಳು "ನನ್ನ ಸೇವಕಿ ಇಂದು ಬರಲಿಲ್ಲ. ತಾವು ಕೃಪೆಮಾಡಿ ನನ್ನ ಜೊತೆ ಸ್ವಲ್ಪ ದೂರ ಬರುವಿರಾದರೆ ಉಪಕಾರವಾಗುವುದು''ಎಂದಳು.

ಪ್ರತಿದಿನವೂ ಅವಳೊಡನೆ ಸೇವಕಿಯೊಬ್ಬಳು ಬರುತ್ತಿದ್ದಳು. ಆದರೆ ಇವತ್ತು ಬಂದಿರಲಿಲ್ಲ. ಸತ್ಯನ ಮನಸ್ಸು ಚಿಂತೆಗೊಳಗಾಯಿತು. ಅವಳೊಡನೆ—ಅಪರಿಚಿತ ತರುಣಿಯೊಬ್ಬಳ ಜೊತೆ—ಹೋಗುವುದು ಸರಿಯಲ್ಲವೆಂದು ನಿರ್ಧರಿಸಿದ. ತನ್ನಿಂದ ಬರಲಾಗುವುದಿಲ್ಲವೆಂದು ಹೇಳಲು ಪ್ರಯತ್ನಿಸಿದ. ಆದರೆ ಬಾಯಿಂದ ಮಾತೇ ಹೊರಡದಾಯಿತು. ಸತ್ಯನ ಅವಸ್ಥೆಯನ್ನರಿತು ತರುಣಿ ಒಂದು ವಿಧವಾಗಿ ನಕ್ಕಳು. ಆ ನಗೆಯಲ್ಲಿ ಯಾವುದನ್ನು ಬೇಕಾದರೂ ಸಾಧಿಸುವ ಶಕ್ತಿಯೊಂದಡಗಿತ್ತು. ಒಮ್ಮೆಲೇ ಸತ್ಯ ತನ್ನನ್ನು ತಾನೇ ದೂರಮಾಡಿ "ನಡೆಯಿರಿ ಹೋಗೋಣ'' ಎಂದು ಹೇಳಿ ಆ ರಮಣಿಯನ್ನು ಅವಳ ನೆರಳಿನಂತೆ ಹಿಂಬಾಲಿಸಿದ. ಸ್ವಲ್ಪ ದೂರ ನಡೆದ ನಂತರ ರಮಣಿ ಪುನಃ ಮಾತನ್ನು ಮುಂದುವರಿಸಿದಳು :

"ಸೇವಕಿ ಖಾಯಿಲೆ ಬಿದ್ದುದರಿಂದ ಬರಲಿಲ್ಲ. ಗಂಗಾಸ್ನಾನವಿಲ್ಲದೆ ನನ್ನಿಂದ ಇರಲು ಸಾಧ್ಯವಿಲ್ಲ; ಇದು ನನ್ನ ಸ್ವಭಾವ. ಪ್ರಾಯಶಃ ನೀವೂ ಇದೇ ಸ್ವಭಾವದವರೆಂದು ಕಾಣುತ್ತದೆ." ಓರೆನೋಟವೊಂದು ಅವಳನ್ನು ಬಿಟ್ಟು ಸತ್ಯೇಂದ್ರನನ್ನು ಸೇರಿತು.

ಸತ್ಯ ಮೆಲ್ಲಗೆ ಹೇಳಿದ, "ಹೌದು. ನಾನೂ ಗಂಗಾಸ್ನಾನಕ್ಕಾಗಿ ನಿತ್ಯವೂ ಬರುತ್ತೇನೆ.''

" ತಾವು ಇರುವುದೆಲ್ಲಿ?"

" ನನ್ನ ಮನೆ **ಚೋರ್‌ಬಾಗ್**ನಲ್ಲಿ."

" ನನ್ನ ಮನೆಯಿರುವುದು **ಜೋಡಾ-ಸಾಕು**ವಿನಲ್ಲಿ. ತಾವು ನನ್ನನ್ನು ಪತರಿಯಾಘಾಟಿಯವರೆಗೆ ತಲ್ಪಿಸಿ ದೊಡ್ಡ ರಸ್ತೆಯಿಂದ ಹೊರಟುಹೋಗಿ."

" ಒಳ್ಳೆಯದು."

ಪುನಃ ಬಹಳ ಹೊತ್ತಿನವರೆಗೆ ಏನೂ ಮಾತಾಗಲಿಲ್ಲ. ಚಿತಪುರದ ಹಾದಿಗೆ ಬರುತ್ತಿದ್ದಂತೆಯೇ ಅವಳು ತಿರುಗಿ ನಿಂತು, ಹಿಂದಿನ ನಗೆಯನ್ನೇ ಮತ್ತೊಮ್ಮೆ ತುಟಿಗಳ ಮೇಲೆ ಹರಿಸುತ್ತಾ " ಸಾಕು, ನನ್ನ ಮನೆ ಹತ್ತಿರದಲ್ಲಿಯೇ ಇದೆ. ತಾವು ಇನ್ನು ಹೋಗಬಹುದು. ನಮಸ್ಕಾರ" ಎಂದಳು.

ಸತ್ಯೇಂದ್ರ ಪ್ರತಿ ನಮಸ್ಕಾರಮಾಡಿ ತಲೆ ತಗ್ಗಿಸಿಕೊಂಡು ಮುಂದಕ್ಕೆ ಹೊರಟ. ಅಂದು ಅವನ ಮನಸ್ಸು ಅಲ್ಲೋಲಕಲ್ಲೋಲವಾಗಿ ಆಸೆ ನಿರಾಸೆಗಳ ನಡುವೆ ಗತಿಕಾಣದೆ ಅಲೆದಾಡುತ್ತಿತ್ತು.

ಮಾರನೆಯ ದಿನ ಸತ್ಯೇಂದ್ರ ಎದ್ದಾಗ ಆಗಲೇ ಬಿಸಿಲು ಚೆನ್ನಾಗಿ ಬಂದಿದ್ದಿತು. ಅವನ ಹೃದಯಾಕಾಶದಲ್ಲಿ ಉಂಟಾದ ವ್ಯಥೆಯ ತರಂಗವೊಂದು ಅವನ ಕಂಠದಿಂದ ನಿಟ್ಟುಸಿರನ್ನಾಶ್ರಯಿಸಿ ಈಚೆ ಬಂತು. ಹಿಂದಿನ ದಿನ ವ್ಯರ್ಥ ಆಯಿತೆಂದು ತನ್ನಲ್ಲಿಯೇ ದುಃಖಪಟ್ಟ. ಸೇವಕನೊಬ್ಬ ಏನೋ ಕೆಲಸಕ್ಕಾಗಿ ಹೋಗುತ್ತಿದ್ದ. ಅವನನ್ನು ಒಂದೇ ಸಮ ಗದರಿಸುತ್ತಾ " ಇಷ್ಟು ಹೊತ್ತಾಗಿದೆ; ಆಗಲೇ ಬಿಸಿಲಾಗಿದೆ; ನನ್ನನ್ನು ಎಬ್ಬಿಸಬಾರದಾಗಿತ್ತೇನೋ, ಥು" ಎಂದು ಬೈಗಳನ್ನು ಕೊನೆಮುಟ್ಟಿಸಿದ.

ಸೇವಕ ತಬ್ಬಿಬ್ಬಾದ. ಸುಮ್ಮನೆ ಅಲುಗಾಡದೆ ಮೂಕನಂತೆ ನಿಂತುಬಿಟ್ಟ. ಸತ್ಯ ಬೇರೆ ಬಟ್ಟೆಗಳನ್ನೂ ಸಹ ತೊಡದೆ ಕೋಪದಿಂದ ಹೊರಹೊರಟ.

ಹೊರಕ್ಕೆ ಬರುತ್ತಲೂ ಗಾಡಿಯೊಂದನ್ನು ಗೊತ್ತುಮಾಡಿ ಪತರಿಯಾಘಾಟಿಗೆ ಹೊಡೆಯುವಂತೆ ಹೇಳಿದ. ದಾರಿಯಲ್ಲಿ ತನ್ನ ಮೈಯನ್ನೆಲ್ಲಾ ಕಣ್ಣು ಮಾಡಿಕೊಂಡು ಏನನ್ನೋ ಹುಡುಕುತ್ತಿದ್ದ. ಗಂಗೆಯ ಸಮೀಪಕ್ಕೆ ಬಂದು ಘಾಟಿಯ ಕಡೆ ನೋಡಿದಾಗ ಅವನ ಕೋಪವೆಲ್ಲಾ ಇಳಿದು

ಹೋಯಿತು. ಒಂದು ದಿನವೆಲ್ಲಾ ತನ್ನ ಕನಸು ನೆನಸೆಲ್ಲಕ್ಕೂ ಒಡತಿಯಾಗಿದ್ದ ಅದೇ ತರುಣಿ ಇದುರಿನಲ್ಲೇ ಇದ್ದಳು. ಅಕಸ್ಮಾತ್ತಾಗಿ ರಸ್ತೆಯುಲ್ಲಿ ಅಮೂಲ್ಯ ರತ್ನವೊಂದು ದೊರಕಿದಷ್ಟು ಸಂತೋಷವಾಯಿತವನಿಗೆ.

ಗಾಡಿಯಿಂದ ಇಳಿಯುತ್ತಿದ್ದಂತೆಯೇ ತರುಣಿ ಹೆಚ್ಚು ಪರಿಚಯುವುಳ್ಳವಳಂತೆ ಸಲಿಗೆಯಿಂದ "ಬಹಳ ಹೊತ್ತುಮಾಡಿದಿರಿ. ನಾನು ಅರ್ಧ ಘಂಟೆಯಿಂದಲೂ ನಿಮಗಾಗಿ ಕಾಯುತ್ತಿದ್ದೇನೆ. ಬೇಗ ಸ್ನಾನಮಾಡಿ. ಇಂದೂ ಸಹ ನನ್ನ ಸೇವಕಿ ಬಂದಿಲ್ಲ'' ಎಂದು ಹೇಳಿದಳು.

''ಒಂದೇ ಒಂದು ನಿಮಿಷ." ಎಂದವನೇ ಸ್ನಾನಕ್ಕೆ ಸತ್ಯೇಂದ್ರ ಇಳಿದ. ಅವನ ಈಜುವ ಹುಚ್ಚು ಎಲ್ಲಿ ಹೋಯಿತೋ ಏನೋ. ಹೇಗೋ ಒಂದೆರಡುಸಲ ಮುಳುಗಿ, ಬಂದವನೇ "ನನ್ನ ಗಾಡಿ ಎಲ್ಲಿ ಹೋಯಿತು?" ಎಂದು ಕೇಳಿದ.

" ನಾನು ಬಾಡಿಗೆ ಕೊಟ್ಟು ಕಳುಹಿಸಿದೆ."

" ನೀವು ಬಾಡಿಗೆ ಕೊಟ್ಟಿರಾ!''

" ಹೌದು, ನಡೆಯಿರಿ,'' ಎಂದು ಪುನಃ ಭುವನ ಮೋಹಕವಾದ ಅವಳದೇ ಆದ ನಗೆಯನ್ನು ಮೊಳಗುತ್ತಾ ಮುಂದೆ ನಡೆದಳು.

ಸತ್ಯ ಒಂದೇಬಾರಿಗೆ ತನ್ನ ಹೃದಯುವನ್ನೆಲ್ಲಾ ಅವಳಿಗೆ ಕೊಟ್ಟುಬಿಟ್ಟಿದ್ದ. ಇಲ್ಲದಿದ್ದರೆ ಎಷ್ಟೇ ಅನುಭವವಿಲ್ಲದಿದ್ದರೂ ಒಂದುಬಾರಿಯಾದರೂ ಅವನಿಗೆ ನಡೆಯುತ್ತಿರುವುದೇನೆಂಬುದರಲ್ಲಿ ಸಂಶಯ ಹುಟ್ಟುತ್ತಲಿತ್ತು.

''ನಿಮ್ಮ ಮನೆ ಎಲ್ಲಿದೆಯೆಂದಿರಿ? **ಚೋರ್‌ಬಾಗ್**ನಲ್ಲಿಯೇ?" ತರುಣಿ ಕೇಳಿದಳು.

" ಹೌದು.''

" ಅಲ್ಲೇನು ಕೇವಲ ಕಳ್ಳರು ವಾಸಿಸುತ್ತಾರೇನು?''

ಆಶ್ಚರ್ಯದಿಂದ ಸತ್ಯ " ಏಕೆ!'' ಎಂದ.

''ತಾವು ಚೋರಾಗ್ರೇಸರರು, ಅದಕ್ಕೆ'' ಎಂದು ಹೇಳಿ ತನ್ನ ಕತ್ತನ್ನು ಕುಲುಕಿಸುತ್ತಾ, ಸತ್ಯನನ್ನು ಓರೆನೋಟದಿಂದ ಒಮ್ಮೆ ನೋಡಿ ಸ್ಮಿತವದನಳಾಗಿ ಹಂಸಗತಿಯಿಂದ ಮುಂದಕ್ಕೆ ನಡೆದಳು. ಪ್ರತಿದಿನಕ್ಕಿಂತ ಈ ದಿನ

ಅವಳ ಸೊಂಟದ ಮೇಲೆ ಸ್ವಲ್ಪ ದೊಡ್ಡದಾದ ಕೊಡವಿತ್ತು. ಅದರ ತುಂಬ ಗಂಗಾಜಲವಿದ್ದುದರಿಂದ ಆಗಾಗ ಅವಳು ನಡೆಯುತ್ತಿದ್ದಾಗ 'ಛಲ್, ಛಲ್' ಶಬ್ದ ಮಾಡುತ್ತಾ ನೀರು ಮೇಲಕ್ಕೆ ಹಾರುತ್ತಿತ್ತು.

ತರುಣಿಯು ಸಮೀಪಕ್ಕೆ ಬಂದಾಗ ಸತ್ಯ ಸಂಕೋಚದಿಂದ "ಗಾಡಿಯ ಬಾಡಿಗೆ ?" ಎಂದ. ತರುಣಿ ತಿರುಗಿನಿಂತು "ಒಂದು ರೀತಿಯಿಂದ ಅದೂ ನೀವೇ ಕೊಟ್ಟದ್ದಲ್ಲವೇ ?" ಎಂದು ಕೋಮಲಸ್ವರದಲ್ಲಿ ಮಾತುಗಳನ್ನು ನುಡಿಸಿದಳು.

ಅವಳ ಸಂಕೇತ ತಿಳಿಯಲಾರದೆ ಸತ್ಯೇಂದ್ರ ಪುನಃ ಕೇಳಿದ : "ಅದು ನನ್ನದು ಹೇಗೆ ?"

"ಈಗ ನನ್ನಲ್ಲಿ 'ನನ್ನದು' ಎನ್ನುವುದು ಏನಿದೆ? ನನ್ನದೆಂಬುದನ್ನೆಲ್ಲಾ ನೀವು ಎಂದೋ ಅಪಹರಿಸಿಬಿಟ್ಟದ್ದೀರಿ" ಎಂದವಳೇ ಮುಖವನ್ನು ಬೇರೆಕಡೆ ತಿರುಗಿಸಿಕೊಂಡಳು. ಕೇವಲ ಉಕ್ಕಿಬರುತ್ತಿದ್ದ ನಗುವನ್ನು ಬಲಾತ್ಕಾರವಾಗಿ ತಡೆಯುವುದಕ್ಕಾಗಿಯೇ ಬೇರೆಕಡೆಗೆ ತಿರುಗಿದಳೆಂಬುದರ ಅರಿವೂ ಸತ್ಯೇಂದ್ರನಿಗಾಗಲಿಲ್ಲ.

ಈ ಅಭಿನಯ ಸತ್ಯನಿಗೆ ತಿಳಿಯಲಿಲ್ಲ. ಅವಳು ತೋರಿದ ಕಳ್ಳತನದ ಸಂಕೇತ ಮಿಂಚಿನಂತೆ ಅವನ ಸಂಶಯಗಳನ್ನೆಲ್ಲಾ ದೂರ ಹೊಡೆದೋಡಿಸಿ ಅಂಧಕಾರದಿಂದ ತುಂಬಿದ ಅವನ ಹೃದಯದ ಅಂತರಾಲವನ್ನೂ ಸಹ ಪ್ರಕಾಶಗೊಳಿಸಿತು. ಅವಳಲ್ಲಿ ಪೂಜ್ಯಭಾವವೊಂದು ಅವನ ಹೃದಯದಲ್ಲಿ ಮಿಡಿಯಿತು. ರಸ್ತೆಯಲ್ಲಿಯೇ ಅವಳ ಸುಕುಮಾರ ಪಾದಗಳ ಮೇಲೆ ಬೀಳಲೇ ಎನಿಸಿತು. ಮರುಕ್ಷಣದಲ್ಲಿಯೇ ನಾಚಿಕೆಯಿಂದ ತಲೆಯನ್ನು ತಗ್ಗಿಸಿದ. ಮತ್ತೊಂದುಬಾರಿ ಮುಖವೆತ್ತಿ ತನ್ನ ಪ್ರಿಯತಮೆಯನ್ನು ನೋಡುವಷ್ಟು ಸಾಹಸವೂ ಅವನಲ್ಲಿ ಉಳಿಯಲಿಲ್ಲ. ಹಾಗೆಯೇ ಮೆಲ್ಲ ಮೆಲ್ಲಗೆ ತನ್ನ ಮನೆಯಕಡೆ ಸಾಗಿದ. ನಡೆಯುತ್ತಿದ್ದುದು ಒಬ್ಬನೇ. ಆದರೆ ಅವನ ಹೃದಯದಲ್ಲಿ ಆ ತರುಣಿ ಭದ್ರವಾಗಿ ಮನೆ ಮಾಡಿದ್ದಳು.

* * * * *

ರಮಣಿಯ ಅಪ್ಪಣೆಯಂತೆ ಅವಳ ಸೇವಕಿ ಫುಟ್‌ಪಾತ್‌ನಲ್ಲಿ ಅವಳಿಗಾಗಿ ಕಾಯುತ್ತಾ ನಿಂತಿದ್ದಳು. ಒಡತಿಯನ್ನು ನೋಡಿದೊಡನೆಯೇ ಅವಳ ಹತ್ತಿರ ವೇಗವಾಗಿ ಹೋದಳು. "ಪಾಪ, ಈ ಬಡಪಾಯಿಯನ್ನು ಏಕೆ ಹಾಗೆ ಕುಣಿಸುತ್ತಿರುವೆ? ಏನಾದರೂ ಇದೆಯೋ ಇವನ ಹತ್ತಿರ? ನಾಲ್ಕಾರು ರೂಪಾಯಿಗಳಾದರೂ ಸಿಕ್ಕುತ್ತವೆ ಏನು ?" ಎಂದು ಸೇವಕಿ ಸತ್ಯೇಂದ್ರ ಹೊರಟ ದಿಕ್ಕಿನ ಕಡೆ ಸೂಚಿಸುತ್ತಾ ಸ್ವಾಭಾವಿಕವಾಗಿ ಕೇಳಿದಳು.

ಒಡತಿ ನಗುತ್ತಾ "ಅದೇನೋ ನನಗೆ ಗೊತ್ತಿಲ್ಲ. ಇವನಂತಹ ಮೂರ್ಖಶಿಖಾಮಣಿಗಳಿಗೆ ಮೂಗುದಾರ ಹಾಕಿ ಜಗ್ಗುವುದರಲ್ಲಿ ನನಗೆ ಬಹು ಪ್ರೀತಿ. ಅದಕ್ಕಾಗಿ ಪ್ರಯತ್ನಿಸುತ್ತಿದ್ದೇನೆ, ಅಷ್ಟೆ." ಎಂದಳು.

ಇಬ್ಬರ ತುಟಿಗಳ ಮೇಲೂ ತುಂಟು ನಗೆ ಹರಿದು ಒಡತಿ ಸಖಿಯರಿಬ್ಬರ ದೃಷ್ಟಿಗಳೂ ಒಂದಾದುವು. ಆ ದೃಷ್ಟಿಯಲ್ಲಿ ಮಾತಿಗೂ ಮಿಗಿಲಾದ ಅರ್ಥಪೂರಿತ ಭಾವವೊಂದು ತಾನೇತಾನಾಗಿ ಮೂಡಿತ್ತು.

ಸ್ವಲ್ಪ ಹೊತ್ತಾದ ಮೇಲೆ ದಾಸಿ ಮಾತು ಮುಂದುವರಿಸಿದಳು. "ನೀನು ಇವನ್ನು ಮಾಡಿದರೂ ಮಾಡಬಹುದು. ಆದರೆ ನೀನು ಏನಾದರೂ ಹೇಳು, ನೋಡಿದರೆ ಒಳ್ಳೆಯ ರಾಜಕುಮಾರನಂತಿದ್ದಾನೆ. ಆ ಸುಂದರ ಮೈಕಟ್ಟಿಗೆ ಒಪ್ಪುವ ಬಣ್ಣ ಇದೆ. ನಿಮ್ಮಿಬ್ಬರ ಜೋಡಿಯಂತೂ ಬಹಳ ಚೆನ್ನಾಗಿರುತ್ತದೆ. ನೀವಿಬ್ಬರೂ ಮಾತನಾಡುತ್ತಾ ನಿಂತಿದ್ದಾಗ 'ಎರಡು ಗುಲಾಬಿಯ ಹೂಗಳು ಈಗತಾನೆ ಅರಳಿವೆಯೋ?' ಎಂಬುವಂತಿತ್ತು."

"ಒಳ್ಳೆಯದು, ನಡೆ" ಎಂದು ನಗುತ್ತಾ, "ಮನಸ್ಸಿಗೆ ಒಪ್ಪಿದ್ದರೆ ನೀನೇ ತೆಗೆದುಕೋ," ಎಂದು ತರುಣಿ ಹೇಳಿದಳು.

ಸೇವಕಿ ಸುಲಭವಾಗಿ ತನ್ನ ಸೋಲನ್ನೊಪ್ಪುವ ಸ್ವಭಾವದವಳಲ್ಲ. "ಅಕ್ಕ, ನೀನೇನಾದರೂ ಹೇಳು, ನೀನು ಬದುಕಿರುವವರೆಗೆ ಇದನ್ನು ಯಾರಿಗೂ ಕೊಡಲಾರೆ, ನಾನು ಈಗಲೆ ಹೇಳಿರುತ್ತೇನೆ." ಎಂದು ಹೇಳಿದಳು.

ಅಂದು ಸತ್ಯೇಂದ್ರ ಅಲ್ಲಿಂದ ಹಿಂತಿರುಗಿ ಬಂದು ಟೆನಿಸನ್‌ನ ಪದ್ಯ

ಒಂದನ್ನು ಮನಸಾರ ಓದಿ ಅದನ್ನು ಬಂಗಾಲಿಗೆ ಅನುವಾದಿಸಲೆತ್ನಿಸುತ್ತ ಕುಳಿತಿದ್ದ. ಅವನ ಮನಸ್ಸು ಶಾಂತವಾಗಿತ್ತು. "ಹಗಲಿನಲ್ಲಿ, ಇಂತಹ ದೊಡ್ಡ ಪಟ್ಟಣ ಕಲಕತ್ತೆಯ ಸಾರ್ವಜನಿಕ ರಸ್ತೆಯಲ್ಲಿ........ಅದೂ ಸ್ನಾನಘಟ್ಟದಲ್ಲಿ ಇಂತಹ ಆಶ್ಚರ್ಯಕರ ಪ್ರೇಮಪ್ರವಾಹ ಹೇಗೆ ಬಂದೀತು? ಆ ಪ್ರವಾಹದಲ್ಲಿ ಹುಟ್ಟುವ ತರಂಗಗಳಲ್ಲಿ ಸಿಕ್ಕಿ ಮುಂದುವರೆಯುವುದಾದರೂ ಎಲ್ಲಿವರೆಗೆ ಸಾಧ್ಯ....ಉಚಿತವೆಂತು?....???" ಈ ಯಾವ ಸಂದೇಹಗಳೂ ಅವನನ್ನು ಕಾಡಲಿಲ್ಲ.

ಎರಡು ದಿವಸಗಳ ನಂತರ ಎಂದಿನಂತೆ ಸ್ನಾನಮಾಡಿ ಮನೆಗೆ ಹಿಂತಿರುಗುತ್ತಿರುವಾಗ ತರುಣಿ ಜೊತೆಯಲ್ಲೇ ಬಂದಳು. ಸ್ವಲ್ಪ ದಿನಗಳ ಪರಿಚಯ ಸಲಿಗೆಗೆ ತಿರುಗಿತ್ತು. "ನೆನ್ನೆ ನಾಟಕಕ್ಕೆ ಹೋಗಿದ್ದೆ. ಪಾಪ! ಆ ಸರಳೆಯ ಕಷ್ಟ ನೋಡಿ ಎದೆಯೊಡೆದು ನೀರಾಯಿತು."

ಸತ್ಯ "ಸರಲಾ" ನಾಟಕ ಓದಿರಲಿಲ್ಲ, ನೋಡಿಯೂ ಇರಲಿಲ್ಲ. ಆದರೆ ಅದಕ್ಕೇ ಸಂಬಂಧಿಸಿದ "ಸ್ವರ್ಣಲತಾ" ಪುಸ್ತಕ ಓದಿದ್ದ. ಇದರಿಂದಲೇ ಮೆಲ್ಲಗೆ ಹೇಳಿದ, "ಹುಂ ಪಾಪ ಬಹಳ ಕಷ್ಟದಿಂದ ಪ್ರಾಣ ಬಿಡುತ್ತಾಳೆ."

"ಅಬ್ಬ, ಅವಳಿಗೆ ಎಂತಹ ಭಯಂಕರ ಕಷ್ಟ ಬಂದಿತ್ತು! ಸರಳೆಯು ತನ್ನ ಪತಿಯನ್ನು ಏತಕ್ಕಾಗಿ ಅಷ್ಟೊಂದು ಪ್ರೀತಿಸುತ್ತಿದ್ದಳು. ಅವಳ ಅತ್ತಿಗೆ ಮಾತ್ರ ಪ್ರೀತಿಸುತ್ತಿರಲಿಲ್ಲವೇಕೆ? ನೀವು ಹೇಳುವಿರಾ?" ದೀರ್ಘನಿಟ್ಟುಸಿರೊಂದು ತರುಣಿಯ ಮಾತುಗಳನ್ನೇ ಹೊಂದಿಕೊಂಡು ಹೊರಹೊಮ್ಮಿತು.

ಸತ್ಯೇಂದ್ರ ಸಂಕ್ಷೇಪವಾಗಿ ಉತ್ತರ ಹೇಳಿದ, "ಅವರವರ ಸ್ವಭಾವ."

"ಹೌದು, ಇದೇ ಸರಿ. ಮದುವೆ ಎಲ್ಲರಿಗೂ ಆಗುತ್ತದೆ. ಆದರೇನು! ಎಲ್ಲರೂ ಒಂದೇ ಸಮನಾಗಿ ಪ್ರೀತಿಸುತ್ತಾರೇನು? ಇಲ್ಲ. 'ಪ್ರೇಮ'ವೆಂದರೇನೆಂಬುದನ್ನು ಸಾಯುವವರೆಗೂ ತಿಳಿಯದ ಎಷ್ಟೋ ಜನರಿದ್ದಾರೆ. ಅದನ್ನು ತಿಳಿಯುವ ಶಕ್ತಿಯೂ ಅವರಲ್ಲಿರುವುದಿಲ್ಲ. ನೀವೇ ನೋಡಿ, ಹೃದಯ ಮುಟ್ಟುವಂಥ ಭಾವಪೂರಿತ ಸಂಗೀತ ಕೇಳುವುದರಲ್ಲೂ ಮನ

ಸ್ಸಿಲ್ಲದ ಜನರೆಷ್ಟೋ ಮಂದಿ........ಇನ್ನು ಕೆಲವರು ಏನೇ ಆಗಲಿ, ಕೋಪಗೊಳ್ಳದವರು, ಕೋಪಗೊಳ್ಳಲಾಗದವರು. ಲೋಕ ಇಂತಹ ಜನರನ್ನು ಬಹಳವಾಗಿ ಹೊಗಳುತ್ತದೆ. ನನಗಾದರೊ ಇಂತಹವರನ್ನು ನಿಂದಿಸಬೇಕೆನಿಸುತ್ತದೆ.''

ಹುಸಿ ನಗುತ್ತಾ ಸತ್ಯ ಕೇಳಿದ, '' ಏಕೆ?''

'' ಅವರು ಅಕ್ಷಮರೆಂದು. ಅಕ್ಷಮತೆಯಲ್ಲಿ ಗುಣವಿರಬಹುದು, ಇಲ್ಲವೆನಲಾರೆ. ಆದರೆ ಅದರಲ್ಲಿ ಸಿಹಿಗಿಂತ ಕಹಿಯೇ ಜಾಸ್ತಿ. ಸರಳೆಯ ಮೈದುನನನ್ನೇ ನೋಡಿ. ತನ್ನ ಪತ್ನಿ ಅಷ್ಟು ಅತ್ಯಾಚಾರ ಮಾಡುತ್ತಿದ್ದರೂ ಅವನಿಗೆ ಕೋಪ ಬರಬೇಡವೇ!"

ಸತ್ಯೇಂದ್ರ ಸುಮ್ಮನೆ ಕೇಳುತ್ತಿದ್ದ. ಪುನಃ ಅವಳೇ ಮಾತು ಮುಂದುವರಿಸಿದಳು. "ಇನ್ನೊಂದು....ಅವನ ಹೆಂಡತಿ ಪ್ರಮದಾ, ಎಂತಹ ಪಿಶಾಚಿ ಹೆಂಗಸು! ನಾನೇ ಆಗಿದ್ದರೆ ಅವಳನ್ನು ಕತ್ತುಹಿಸಿಕಿ ಕೊಲ್ಲುತ್ತಿದ್ದೆ."

ಸತ್ಯ ನಗುತ್ತಾ ಹೇಳಿದ '' ಅದು ಹೇಗೆ ಸಾಧ್ಯ? ಪ್ರಮದಾ ಎಂಬುವಳು ನಿಜವಾಗಿ ಇರಲಿಲ್ಲ. ಅದು ಕೇವಲ ಕವಿಯ ಕಲ್ಪನೆ............''

ಅವನ ಮಾತು ಮುಗಿಯುವುದರಲ್ಲೇ ತಲೆಹಾಕಿ ತರುಣಿ ಹೇಳಿದಳು '' ಕವಿ ಇಂತಹ ಕಲ್ಪನೆಯನ್ನೇ ಏತಕ್ಕಾಗಿಮಾಡಿದ? ಸತ್ಪುರುಷರೆಲ್ಲರೂ ಹೇಳುತ್ತಾರೆ ಪ್ರತಿಯೊಬ್ಬ ಮನುಷ್ಯನ ಅಂತಃಕರಣದಲ್ಲೂ ಭಗವಂತನಿರುತ್ತಾನೆಂದು, ಆತ್ಮನೆಂಬ ಶಕ್ತಿಯಿದೆ ಎಂದು. ಆದರೆ ಪ್ರಮದೆಯ ಜಾಯಮಾನ ನೋಡಿದಮೇಲೆ ಅವಳ ಅಂತಃಕರಣದಲ್ಲಿ ಪರಮಾತ್ಮನಿದ್ದನೆಂದು ಯಾರುತಾನೇ ಹೇಳಿಯಾರು? ನಿಮಗೆ ಸತ್ಯಾಂಶ ಹೇಳುತ್ತೇನೆ. ಪುಸ್ತಕಗಳಲ್ಲಿ ಹೀಗೆ ಹೇಳಿರಬೇಕಾಗಿತ್ತು. 'ಸತ್ಪುರುಷರ ಪುಸ್ತಕಗಳನ್ನೋದಿ ಜನರು ಸಜ್ಜನರಾಗಲಿ, ಒಬ್ಬರು ಮತ್ತೊಬ್ಬರನ್ನು ಪ್ರೀತಿಸಲಿ' ಎಂದು. ಆದರೆ ಹಾಗೇನು ಹೇಳಿಲ್ಲ, ಮನುಷ್ಯನನ್ನು ಮನುಷ್ಯನೇ ದ್ವೇಷಿಸುವಂತಾಗುವ, ಸರ್ವರ ಅಂತಃಕರಣದಲ್ಲಿ ಭಗವಂತನಿರುವನೆಂಬ ಮಾತಿನಲ್ಲಿ ಸರ್ವಥಾ ಅಪನಂಬಿಕೆಯನ್ನು ಹುಟ್ಟಿಸುವ ಗ್ರಂಥಗಳನ್ನು ಬರೆದು ರಾಶಿಹಾಕಿದ್ದಾರೆ. ಇದರಿಂದೇನು ಪ್ರಯೋಜನ?"

ಸತ್ಯ ಆಶ್ಚರ್ಯದಿಂದ ಅವಳ ಮುಖವನ್ನೇ ನೋಡುತ್ತಾ "ನೀನು ಬಹಳ ಪುಸ್ತಕಗಳನ್ನೋದುವಿಯೆಂದು ತೋರುತ್ತದೆ" ಎಂದ.

"ನನಗೆ ಇಂಗ್ಲೀಷ್ ಬರದಿದ್ದರೂ ಬಂಗಾಲೀ ಪುಸ್ತಕಗಳನ್ನೆಲ್ಲಾ ಓದುತ್ತೇನೆ. ಕೆಲವು ದಿನಗಳಂತೂ ಓದುತ್ತಾ ಓದುತ್ತಾ ರಾತ್ರಿಯೇ ಕಳೆದುಹೋಗುತ್ತದೆ. ಇದೇ ದೊಡ್ಡ ರಸ್ತೆ, ನನ್ನ ಮನೆ ಸಮೀಪದಲ್ಲಿಯೇ ಇದೆ. ನಡೆಯಿರಿ ನಿಮಗೆ ಎಲ್ಲಾ ಪುಸ್ತಕಗಳನ್ನೂ ತೋರಿಸುತ್ತೇನೆ."

ಸತ್ಯ ಗಾಬರಿಗೊಂಡು ಕೇಳಿದ. "ಆ! ನಿಮ್ಮ ಮನೆಗೇ?"

"ಹೌದು, ನಮ್ಮ ಮನೆಗೆ ಬನ್ನಿ ಹೋಗೋಣ. ನೀವು ಬರಲೇ ಬೇಕು."

ಸತ್ಯನ ಮುಖವೆಲ್ಲಾ ಬೆವರಿಟ್ಟಿತು. "ಇಲ್ಲ, ಇಲ್ಲ, ಛಿ, ಛಿ" ಎಂದ. ಅವನ ದನಿಯಲ್ಲಿ ಗಾಬರಿ ಎದ್ದು ಕಾಣುತ್ತಿತ್ತು.

"'ಛಿ'ನೂ ಇಲ್ಲ, 'ಛೂ'ನೂ ಇಲ್ಲ. ನಡೆ ಹೋಗೋಣ."

"ಬೇಡ, ಬೇಡ, ಇವತ್ತು ಬೇಡ" ಎಂದು ಹೇಳುತ್ತಾ ಬೇಗ ಬೇಗ ಮುಂದಕ್ಕೆ ಹೊರಟ. ಆ ತರುಣಿ ಅವನ ಪ್ರೀತಿಯ ನಲ್ಲೆಯಾದಳು. ಹೃದಯದಲ್ಲಿ ಸಿದ್ಧಪಡಿಸಿದ್ದ ಜಾಗವನ್ನು ಸತ್ಯೇಂದ್ರ ಅವಳಿಗಾಗಿ ಮೀಸಲಿಟ್ಟು ನಚ್ಚಿನ ಭಾರ ಒಂದನ್ನು ಹೊತ್ತು ಮುಂದೆ ನಡೆದ.

೫

ಸತ್ಯೇಂದ್ರ ಬೆಳಗಿನಜಾವದಲ್ಲೇ ಸ್ನಾನಮುಗಿಸಿಕೊಂಡು ಮನೆಗೆ ಬಂದಿದ್ದ. ಅವನ ಕಣ್ಣುಗಳು ಇನ್ನೂ ಒದ್ದೆಯಾಗಿದ್ದವು. ಅವನ ದೃಷ್ಟಿಯಲ್ಲಿ ಎಂದಿನಂತೆ ಕಾಂತಿ ಇರಲಿಲ್ಲ. ತನ್ನ ಪ್ರಿಯತಮೆಯನ್ನು ನೋಡಿ ನಾಲ್ಕು ದಿವಸಗಳಾಗಿ ಹೋಗಿದ್ದವು. ಅವಳು ಗಂಗಾಸ್ನಾನಕ್ಕೆ ಬಂದಿರಲಿಲ್ಲ.

ಕೆಲವು ದಿವಸಗಳಿಂದ ಆಕಾಶ ಪಾತಾಲದವರೆಗೂ ಎಲ್ಲಾ ವಿಷಯಗಳನ್ನೂ ಸತ್ಯೇಂದ್ರ ಯೋಚಿಸಿ ಮುಗಿಸಿದ್ದ. ಅವನ ಯೋಚನೆಗೆ ಮೇರೆಯೇ ಇರಲಿಲ್ಲ. ಕೆಲವು ಕೆಟ್ಟ ಯೋಚನೆಗಳೂ ಸುಳಿಯುತ್ತಿದ್ದವು "ಅವಳು ಈ ಜಗತ್ತಿನಲ್ಲೇ ಇಲ್ಲದೇ ಹೋಗಿದ್ದರೆ........? ಮೃತ್ಯ

ಶಯ್ಯೆಯಲ್ಲಿ ಮಲಗಿದ್ದರೆ? ಅವಳಿಗೆ ಏನಾಗಿದೆಯೋ ಗೊತ್ತಿಲ್ಲವಲ್ಲಾ" ಎಂದು ಯೋಚಾಗಲೂ ಚಿಂತಿಸುತ್ತಿದ್ದ. ಅವನ ಮುಖದಲ್ಲಿನ ಕಾಂತಿ ಮಾಯವಾಗಿ ಮಂಕು ಹಿಡಿದಿತ್ತು.

ಅವಳಿರುವ ರಸ್ತೆಏನೋ ಅವನಿಗೆ ಗೊತ್ತಿತ್ತು. ಆದರೆ ಇನ್ನಾವ ವಿಷಯವೂ ಗೊತ್ತಿರಲಿಲ್ಲ. "ಮನೆ ಯಾರದು? ಅವಳು ಎಲ್ಲಿರುತ್ತಾಳೆ" ಇದಾವುದೂ ಅವನಿಗೆ ಗೊತ್ತಿರಲಿಲ್ಲ. "ಅಂದು ಅವಳು ನನ್ನನ್ನು ಮನೆಗೆ ಬರುವಂತೆ ಕರೆದಾಗ ನಾನೇಕೆ ಅವಳ ಮಾತನ್ನು ಕೇಳಲಿಲ್ಲ? ಅವಳೊಡನೆ ಹೋಗಿ ಮನೆಯನ್ನು ತಿಳಿದುಕೊಂಡಿದ್ದರೆ" ಎಂದು ಯೋಚಿಸಿದೊಡನೆಯೇ ಪಶ್ಚಾತ್ತಾಪದ ಬೇಗೆ ಅವನನ್ನು ಕಾಡುತ್ತಿತ್ತು.

ನಿಜವಾಗಿಯೂ ಸತ್ಯೇಂದ್ರ ಅವಳನ್ನು ಪ್ರೀತಿಸತೊಡಗಿದ್ದ. ಕೇವಲ ದೃಷ್ಟಿಯ ಪ್ರೀತಿಯಲ್ಲ, ಹೃದಯದ ಅಂತರಾಲದಲ್ಲಿ ಬೇರಿಟ್ಟ ಪ್ರೀತಿ.

"ರಾಯರೇ"

ಸತ್ಯ ಗಾಬರಿಯಿಂದ ತಿರುಗಿದಾಗ ಆ ತರುಣಿಯೊಡನೆ ನಿತ್ಯವೂ ಬರುತ್ತಿದ್ದ ದಾಸಿ ರಸ್ತೆಯ ಒಂದು ಪಕ್ಕದಲ್ಲಿ ನಿಂತಿರುವುದನ್ನು ನೋಡಿದ.

ಸತ್ಯ ಗಾಬರಿಯಿಂದ ಅವಳ ಹತ್ತಿರ ಹೋಗಿ ತುಂಬಿದ ದನಿಯಿಂದಲೆ ಕೇಳಿದ "ಅವಳಿಗೇನಾಗಿದೆ?" ಮಾತನಾಡುತ್ತಿರುವಂತೆಯೇ ಕಣ್ಣಲ್ಲಿ ಹನಿಗೂಡಿತು. ತಡೆಯಲು ಅವನಿಂದ ಆಗಲಿಲ್ಲ. ಹನಿಗಳು ತಾವೇ ತಾವಾಗಿ ಉರುಳಿದವು. ದಾಸಿ ಮಾತ್ರ ಬಹಳ ಕಷ್ಟಪಟ್ಟು ತನ್ನ ನಗೆಯನ್ನು ತಡೆದುಕೊಂಡಳು. ಅವನೆದುರಿಗೆ ನಗೆ ಬಂದುಬಿಟ್ಟೀತೆಂಬ ಭಯದಿಂದ ತಲೆ ತಗ್ಗಿಸಿಕೊಂಡೇ ಹೇಳಿದಳು.

"ಅವಳ ದೇಹಸ್ಥಿತಿ ಬಹಳ ಕೆಟ್ಟಿದೆ. ನಿಮ್ಮನ್ನು ನೋಡಬೇಕೆನ್ನುತ್ತಾಳೆ."

"ಸರಿ, ನಡೆ" ಎಂದು ತನ್ನ ಕಣ್ಣುಗಳನ್ನು ಒರೆಸಿಕೊಳ್ಳುತ್ತಾ ಅವಳ ಹಿಂದೆ ಯೋಚನೆಯ ಭಾರ ಹೊತ್ತು ಹೊರಟ. ಸ್ವಲ್ಪ ದೂರ ಬಂದಮೇಲೆ ಅವನು ದಾಸಿಯನ್ನು ಕೇಳಿದ.

"ಏನು ಖಾಯಿಲೆ, ಬಹಳ ಹೆಚ್ಚಾಗಿದೆಯೇನು?"

"ಅಂತಹ ದೊಡ್ಡ ಖಾಯಿಲೆ ಏನೂ ಅಲ್ಲ, ಆದರೆ ಜ್ವರ ಮಾತ್ರ ಜಾಸ್ತಿಯಾಗಿದೆ."

ಮನಸ್ಸಿನಲ್ಲೇ ಸತ್ಯ ಅವಳ ಆರೋಗ್ಯಭಾಗ್ಯಕ್ಕಾಗಿ ಈಶ್ವರನನ್ನು ಪ್ರಾರ್ಥಿಸಿದ.

ಮನೆಯನ್ನು ನೋಡುತ್ತಲೇ ಬಹಳ ದೊಡ್ಡ ಬಂಗಲೆ ಎಂದು ತಿಳಿಯಿತು. ಒಬ್ಬ ವಾಚ್‌ಮನ್ ಬಾಗಿಲಿನಲ್ಲಿ ಕುಳಿತು ತೂಕಡಿಸುತ್ತಿದ್ದ.

"ಅವಳ ತಂದೆ ನಾನು ಬಂದುದರಿಂದ ಕೋಪಗೊಳ್ಳುವುದಿಲ್ಲ ತಾನೆ? ಅವರಿಗೆ ನನ್ನ ಪರಿಚಯವಿಲ್ಲ." ಎಂದು ಸಂಕೋಚದಿಂದ ದಾಸಿಯನ್ನು ಕೇಳಿದ.

"ಅವಳಿಗೆ ತಂದೆಯಿಲ್ಲ, ತಾಯಿ ಮಾತ್ರ ಇದ್ದಾಳೆ. ಅವಳಂತೆಯೇ ಅವಳ ತಾಯಿಯೂ ಸಹ ನಿಮ್ಮನ್ನು ಪ್ರೀತಿಸುತ್ತಾಳೆ."

ಇನ್ನೇನನ್ನೂ ಹೇಳದೆ ಸತ್ಯ ಮನೆಯನ್ನು ಪ್ರವೇಶಿಸಿದ. ಮೆಟ್ಟಿಲುಗಳನ್ನು ಹತ್ತಿ ಇದೇ ತಮ್ಮ ಮನೆಯೆನ್ನುವಂತೆ ದಾಸಿ ಮುಖಸನ್ನೆ ಮಾಡಿದಳು. ದಾಸಿಯನ್ನೇ ಹಿಂಬಾಲಿಸುತ್ತಾ ಮೂರನೆಯ ಅಂತಸ್ತಿಗೆ ಬಂದ. ಅಚ್ಚುಕಟ್ಟಾಗಿ ಸಜ್ಜುಗೊಳಿಸಿದ್ದ ಮೂರು ಕೋಣೆಗಳು ಅವನ ಕಣ್ಣಿಗೆ ಬಿದ್ದುವು. ಮೂಲೆ ಕೋಣೆಯಿಂದ ಶಬ್ದ ಭೇದಿಸಿಕೊಂಡು ಬರುತ್ತಿತ್ತು. ಆ ಕೋಣೆಯೊಳಗಿದ್ದವರು ಮಿತಿಮೀರಿದ ನಗೆಯಾಟದಲ್ಲಿ ಸ್ವೇಚ್ಛೆಯಾಗಿ ತೊಡಗಿದ್ದರು. ಜೊತೆಗೆ ತಬಲ ಮತ್ತು ಗೆಜ್ಜೆಗಳ ಆರ್ಭಟ ಇದಕ್ಕೆ ಹುಚ್ಚು ತಾಳ ಬಡೆದಂತಿತ್ತು. ಆ ಕೋಣೆಯ ಕಡೆಗೇ ಬೆರಳು ಮಾಡಿ "ಇದೇ ಕೋಣೆ, ಒಳಗೆ ದಯಮಾಡಿ" ಎಂದಳು, ದಾಸಿ. ಅವಳ ದನಿಯಲ್ಲಿ ಎಷ್ಟೋಬಾರಿ ಇದೇ ರೀತಿ ಕೈಬೆರಳು ತೋರಿ ಕೋಣೆಯ ಪರಿಚಯ ಮಾಡಿಕೊಟ್ಟ ಸರಾಗ ಎದ್ದು ಕಾಣುತ್ತಿತ್ತು.

ಕೋಣೆಯಲ್ಲಿ ಇದ್ದಕ್ಕಿದ್ದಂತೆ ಹುಚ್ಚು ಗಲಾಟೆಗೆ ಆರಂಭವಾಯಿತು. ಅಲ್ಲಿನ ದೃಶ್ಯ ನೋಡಿದ ಸತ್ಯೇಂದ್ರನ ತಲೆ ತಿರುಗಲಾರಂಭಿಸಿತು. ಮೂರ್ಛೆ ಬೀಳುವ ಪರಿಸ್ಥಿತಿಗೆ ಎಡೆ ಕೊಡದೆ ಬಾಗಿಲಿಗೆ ಸ್ವಲ್ಪಹೊತ್ತು ಒರಗಿಕೊಂಡು

ಸುಧಾರಿಸಿಕೊಂಡ. ನಂತರ ಎರಡು ಕಣ್ಣುಗಳನ್ನೂ ಮುಚ್ಚಿಕೊಂಡು ಹೊಸ್ತಿಲಿನ ಮೇಲೆ ಕುಳಿತ.

ಕೋಣೆಯಲ್ಲಿ ದೊಡ್ಡದಾದ ರತ್ನಗಂಬಳಿಯೊಂದು ಹಾಸಿತ್ತು. ಅಲ್ಲಲ್ಲಿ ಕುಳಿತುಕೊಳ್ಳಲೋಸುಗ ಒರಗುದಿಂಬುಗಳಿದ್ದುವು; ಅದನ್ನು ಒರಗಿಕೊಂಡು ದೊಡ್ಡ ಮನುಷ್ಯರಂತೆ ಉಡುಪು ಧರಿಸಿದ್ದ ಮೂರು ನಾಲ್ಕು ಜನ ಕುಳಿತಿದ್ದರು. ಒಬ್ಬ ಹಾರ್ಮೋನಿಯಮ್, ಮತ್ತೊಬ್ಬ ತಬಲ ಬಾರಿಸುತ್ತಿದ್ದ. ಇನ್ನೊಬ್ಬ ಸಂತೋಷದಿಂದ ಮಧುಪಾನ ಮಾಡುತ್ತಾ ವೈಮರೆಯುತ್ತಿದ್ದ. ಆ ತರುಣಿ ಕುಣಿಯುತ್ತಿದ್ದಳು. ಅವಳ ಕಾಲುಗಳಲ್ಲಿ ಗೆಜ್ಜೆ, ಶರೀರದ ತುಂಬ ಆಭರಣಗಳ ಹೊದಿಕೆ ಇದ್ದವು. ಮಧುಪಾನದಿಂದ ಕೆಂಪಾದ ಅವಳ ಕಣ್ಣುಗಳು ತೂರಾಡುತ್ತಿದ್ದವು. ಸತ್ಯನನ್ನು ನೋಡುತ್ತಲೇ ಅವಳು ಅವನ ಸಮೀಪಕ್ಕೆ ಬಂದು ಕಿಲಕಿಲ ನಗುತ್ತಾ "ಮಿತ್ರನೇ, ನಿನಗೆ ಮೂರ್ಛೆ ಬಂದಿರಲಿಲ್ಲತಾನೆ? ಇಂತಹ ಹಾಸ್ಯ ಕಂಡರೆ ನನಗೆ ಭಯವಾಗುತ್ತದೆ. ಏಳಿನ್ನು ಸಾಕು ಉಪಹಾಸ" ಎಂದು ಅವನನ್ನು ಕೈಯ್ಯಿಂದ ಜಗ್ಗಿದಳು.

ವಿದ್ಯುತ್ ಸ್ಪರ್ಶವಾದಂತೆ ಸತ್ಯೇಂದ್ರನ ಶರೀರವೆಲ್ಲಾ ಅವಳ ಸ್ಪರ್ಶದಿಂದ ನಡುಗಿತು.

ತರುಣಿ ಪುನಃ ಮಾತು ಮುಂದುವರಿಸಿದಳು. "ನನ್ನ ಹೆಸರು ಚಂಚಲ, ನಿನ್ನ ಹೆಸರೇನು ಮೂರ್ಖನೆಂದೋ ಅಥವಾ ಜ್ಞಾನಿಯೆಂದೋ ಹೇಳು.''

ಅಲ್ಲಿದ್ದವರೆಲ್ಲರೂ ಖೇಕೆ ಹಾಕಿಕೊಂಡು ನಗಲಾರಂಭಿಸಿದರು. ದಾಸಿಯಂತೂ ನಗುತ್ತಾ ನಗುತ್ತಾ ರತ್ನಗಂಬಳಿಯಮೇಲೆ ಬಿದ್ದು ಹೊರಳಾಡುತ್ತಾ "ಬಿಡು ಅಕ್ಕ, ನೀನೂ ಒಳ್ಳೆ ಉಪಹಾಸವನ್ನೇ ಮಾಡಬಲ್ಲೆ" ಎಂದಳು. ಕೋಪವನ್ನು ಕರೆಯುತ್ತಾ "ಸುಮ್ಮನಿರೆಂದು" ಚಂಚಲ ಗದರಿಸಿದಳು.

ಪುನಃ ಸತ್ಯನನ್ನು ಕುರಿತು "ದಯಮಾಡಿ, ಇಲ್ಲಿ ಕುಳಿತುಕೊಳ್ಳಿ" ಎಂದು ಹೇಳಿದಳು. ಇಷ್ಟೇ ಅಲ್ಲದೆ ಅವನನ್ನು ಬಲಾತ್ಕಾರವಾಗಿ ಎಳೆದು ತಂದು ಕುರ್ಚಿಯ ಮೇಲೆ ಕುಳ್ಳಿರಿಸಿ ಅವನ ಕಾಲಿನ ಸಮೀಪದಲ್ಲಿ ತಾನೂ

ಮುಂಡಿಯೂರಿ ಕುಳಿತು ಕೈ ಜೋಡಿಸಿಕೊಂಡು ಹಾಡನ್ನೇಳಲು ಆರಂಭಿಸಿದಳು. ಹಾಡು ಶೃಂಗಾರ ರಸದಿಂದ ತುಂಬಿತ್ತು. ಇದನ್ನು ಕೇಳುತ್ತಲೇ ಮಿತಿಮೀರಿ ಮಧುವನ್ನು ಕುಡಿದು ಬುದ್ಧಿಶೂನ್ಯನಾಗಿದ್ದ ಮನುಷ್ಯ ಸತ್ಯನ ಪಾದಗಳಲ್ಲಿ ತಾನೂ ಬಿದ್ದು "ನಾನು ಮಹಾ ಪಾಪಿ, ತಮ್ಮ ಪಾದಧೂಳಿಯನ್ನು........" ಇನ್ನೂ ಏನೋ ಹೇಳಬೇಕೆಂದು ಸುಮ್ಮನೆ ತೊದಲಿದ. ಅವನ ನಾಲಿಗೆಯು ಒಡೆತನ ಅವನದಾಗಿರಲಿಲ್ಲ.

ಅದೃಷ್ಟದಿಂದಲೋ ಏನೋ! ಸ್ನಾನವಾದ ಮೇಲೆ ಸತ್ಯೇಂದ್ರ ಒಂದು ಮಗುಟ ಉಟ್ಟಿದ್ದ.

ಹಾರ್ಮೋನಿಯಂ ಬಾರಿಸುತ್ತಿದ್ದವನು ಇನ್ನೂ ಮತ್ತನಾಗಿರಲಿಲ್ಲ. ಅವನು ಇತರರನ್ನು ಕುರಿತು, "ಪಾಪ, ಅವರನ್ನೇಕೆ ಹಾಸ್ಯಮಾಡುತ್ತೀರಿ?" ಎಂದ.

ಚಂಚಲೆ ನಗುತ್ತಾ "ಹಾಸ್ಯವೆಂತಹದು, ಇದು ನಿಜವಾದುದು'' ಸತ್ಯನ ಕಡೆ ತಿರುಗಿ "ನಿಜವಾದ ತಮಾಷೆಯೆಂದರೆ ಇದೇ. ನಿಮಗೆ ಇದೊಂದು ಸುದಿನ. ಇಂತಹ ತಮಾಷೆಗಳನ್ನು ನಾನಲ್ಲದೇ ಇನ್ಯಾರು ತೋರಿಸುವವರು ಹೋಗಲಿ ಮಡೆಯ! ನೀನು ನನ್ನನ್ನು ಏನೆಂದು ತಿಳಿದಿದ್ದೆ. ನನ್ನಾಣೆ ನಿಜವಾಗಿ ಹೇಳು. ಪ್ರತಿನಿತ್ಯವೂ ನಾನು ಗಂಗಾಸ್ನಾನ ಮಾಡುತ್ತಿದ್ದುದರಿಂದ, ಬ್ರಾಹ್ಮಣಳೂ ಅಲ್ಲ, ಮುಸಲ್ಮಾನಳೂ ಅಲ್ಲ, ಈಸಾಯಿಯೂ ಅಲ್ಲವೆಂದು ಊಹಿಸಿದೆಯಾ? ಹಿಂದೂ ಜಾತಿಯ ಇಷ್ಟು ದೊಡ್ಡ ಹುಡುಗಿಯನ್ನು ನೋಡಿದಮೇಲೆ ನಾನು ಸಧವೆಯೋ ಅಥವಾ ವಿಧವೆಯೋ ಇರಬಹುದೆಂದು ನೀನು ತಿಳಿದುಕೊಳ್ಳಬೇಕಾಗಿತ್ತು. ಹೀಗಿದ್ದರೂ ನೀನು ನನ್ನನ್ನು ಪ್ರೀತಿಸಲು ಯತ್ನಿಸಿದುದೇಕೆ? ನನ್ನನ್ನು ವಿವಾಹವಾಗಲೆಂದೋ ಅಥವಾ ಮರುಳಿಟ್ಟು ಹೊಡೆದುಕೊಂಡು ಹೋಗೋಣವೆಂದೊ? ಹುಂ. ಉತ್ತರ ಹೇಳು" ಎಂದಳು.

ಮತ್ತೊಂದು ಬಾರಿ ಕೋಣೆಯೆಲ್ಲಾ ನಗುವಿನಿಂದ ತುಂಬಿತು. ಯಾರು ಯಾರು ಏನು ಹೇಳಿದರೋ ಅದೊಂದನ್ನೂ ಸತ್ಯ ಗಮನಿಸಲಿಲ್ಲ. ತಲೆಯನ್ನು ಎತ್ತಲೇ ಇಲ್ಲ. ಯಾರಿಗೂ ಯಾವ ಜವಾಬ [illegible]

ಪಾಪ! ಅವನು ತನ್ನ ಮನಸ್ಸಿನಲ್ಲಿ ಅನುಭವಿಸುತ್ತಿದ್ದುದನ್ನು ಹೇಗೆ ಹೊರಗೆಡಹಿಯಾನು? ತಿಳಿಸಿದರೂ ಅದನ್ನು ನಂಬುವವರು ಯಾರು?

ಏನನ್ನೋ ಒಮ್ಮೆಲೇ ಧ್ಯಾನಿಸಿಕೊಂಡವಳಂತೆ ಚಂಚಲ ಎದ್ದಳು. "ನಾನೂ ಸರಿಯೆ! ಶ್ಯಾಮಾ! ಎಲ್ಲಿ ಹೋದೆ, ರಾಯರಿಗೆ ಕೊಂಚ ಉಪಹಾರ ತೆಗೆದುಕೊಂಡು ಬಾ. ಪಾಪ! ಸ್ನಾನಮಾಡಿ ಬಂದಿದ್ದಾರೆ. ನಾನು ಕೇವಲ ಹಾಸ್ಯಮಾಡಿದೆನೇ ಹೊರತು ಅವರ ಕಡೆ ಗಮನವೇ ಕೊಡಲಿಲ್ಲ. ಹೋಗು, ಬೇಗ ಹೋಗು" ಎಂದು ಶ್ಯಾಮಳನ್ನು ಉಪಹಾರ ತರುವುದಕ್ಕಾಗಿ ಕಳುಹಿಸಿದಳು. ಸ್ವಲ್ಪ ಹಿಂದೆ ವ್ಯಂಗ್ಯ ಮತ್ತು ಉಪಹಾಸ ಇವುಗಳಿಂದ ಕೂಡಿದ ಆ ಚಂಚಲೆಯ ಕಟು ಕಂಠ ಈಗ ಕರಗಿಹೋಗಿ ಸ್ನೇಹಯುಕ್ತವಾದ ಸಹಜ ಅನುತಾಪದಿಂದ ಕೂಡಿತ್ತು.

ಸ್ವಲ್ಪ ಹೊತ್ತಿನೊಳಗಾಗಿಯೇ ದಾಸಿ ಉಪಹಾರದ ತಟ್ಟೆ ತಂದಳು. ಅದನ್ನು ತನ್ನ ಕೈಯಲ್ಲೇ ತೆಗೆದುಕೊಂಡು, ಸತ್ಯನ ಸಮೀಪದಲ್ಲಿ ಮಂಡಿಯೂರಿ ಕುಳಿತು ಚಂಚಲ "ತೆಗೆದುಕೊ, ತಲೆಯೆತ್ತು!........ಸ್ವಲ್ಪ ಉಪಹಾರ ತೆಗೆದುಕೊ" ಎಂದು ಹೇಳಿದಳು. ಇದುವರೆಗೂ ಸತ್ಯೇಂದ್ರ ತನ್ನ ಎಲ್ಲ ಶಕ್ತಿಯನ್ನೂ ಒಟ್ಟುಮಾಡಿ ತಡೆದಿಟ್ಟಿದ್ದ. ಈಗ ಆ ಶಕ್ತಿ ಅವನದಾಯಿತು.

"ನಾನು ತಿನ್ನುವುದಿಲ್ಲ" ಎಂದು ಸ್ಪಷ್ಟ ಹೇಳಿದ.

"ಏಕೆ! ನಿನ್ನ ಜಾತಿ ಹೋಗುವುದೇನು? ನಾನೇನು ಅಸ್ಪೃಶ್ಯಳೇ?"

ಶಾಂತನಾಗಿ ಸತ್ಯೇಂದ್ರ ಹೇಳಿದ, "ನೀನು ಒಂದುವೇಳೆ ಅಸ್ಪೃಶ್ಯಳಾಗಿದ್ದಿದ್ದರೂ ನಾನು ತಿನ್ನುತ್ತಿದ್ದೆ. ಆದರೆ ನೀನು........" ಮುಂದೆ ಅವನು ಆಡಬೇಕೆಂದಿದ್ದ ಮಾತುಗಳನ್ನು ಅವನ ಕೆಂಡದಂತಿದ್ದ ಕಣ್ಣುಗಳೇ ಮುಗಿಸಿದುವು.

ಕಿಲಕಿಲನೆ ನಗುತ್ತಾ ಚಂಚಲೆ "ರಾಯರನ್ನು ಕೇವಲ ಮೂರ್ಖರೆಂದು ತಿಳಿದಿದ್ದೆ. ಪರವಾಗಿಲ್ಲ, ಚಾಕು ಕಠಾರಿಗಳನ್ನು ಸಹ ಉಪಯೋಗಿಸಬಲ್ಲರು." ಮಾತು ಮುಗಿಸಿ ಪುನಃ ನಕ್ಕಳು.

ಆ ನಗೆಯಲ್ಲಿ ಆಕಾರವೊಂದಿತ್ತೇ ಹೊರತು ಜೀವವೇ ಇರಲಿಲ್ಲ. ಆ ನಗೆಯಿಂದ ಮತ್ತಾರೂ ನಗಲಿಲ್ಲ. ಸ್ವಲ್ಪ ಹಿಂದಿದ್ದ ' ಬುಚ್ಚು ' ಗಲಾಟೆ

ಮಾಯವಾಗಿ ಮೌನ ನೆಲೆಸಿತ್ತು. ಮೌನವನ್ನು ಭೇದಿಸಿಕೊಂಡು ಸತ್ಯ ಹೇಳಿದ, "ನನ್ನ ಹೆಸರು ಮೂರ್ಖನೆಂದಲ್ಲ, ಸತ್ಯೇಂದ್ರನೆಂದು. ಚಾಕು-ಕಠಾರಿಗಳನ್ನು ಪಯೋಗಿಸುವುದನ್ನು ನಾನೇನೂ ಕಲಿತಿಲ್ಲ. ಆದರೆ ನನ್ನ ತಪ್ಪು ನನಗೆ ತಿಳಿದಾಗ ಮಾತ್ರ ಅದನ್ನು ತಿದ್ದಿಕೊಳ್ಳುವುದನ್ನು ಕಲಿತಿದ್ದೇನೆ.''

ಏನೋ ಹೇಳಬೇಕೆಂದಿದ್ದ ಚಂಚಲೆ ಅದನ್ನು ತಡೆದು ಸ್ವಲ್ಪ ಹೊತ್ತಾದಮೇಲೆ ಹೇಳಿದಳು. "ನಾನು ಮುಟ್ಟಿದುದನ್ನೂ ನೀನು ತಿನ್ನುವುದಿಲ್ಲವೇ ?"

"ಇಲ್ಲ.''

ಚಂಚಲೆ ಎದ್ದು ನಿಂತು ಒಂದೇ ದನಿಯಲ್ಲಿ ಹೇಳಿದಳು. "ನೀನು ಖಂಡಿತ ತಿಂದೇ ತಿನ್ನುತ್ತೀ. ಇಂದಲ್ಲದಿದ್ದರೆ ನಾಳೆ, ನಾಳೆಯಲ್ಲದಿದ್ದರೆ ಇನ್ನೆರಡು ದಿವಸಗಳ ಮೇಲೆ. ಇದು ಜ್ಞಾಪಕವಲ್ಲಿರಲಿ.'' ಅವಳ ಮಾತಿನಲ್ಲಿ ತೀವ್ರತೆ ಎದ್ದು ಕಾಣುತ್ತಿತ್ತು.

ಸತ್ಯೇಂದ್ರ ತಲೆಯಲ್ಲಾಡಿಸುತ್ತಾ, "ಎಲ್ಲರೂ ತಪ್ಪು ಮಾಡುತ್ತಾರೆ. ನನ್ನ ತಪ್ಪು ಎಷ್ಟು ದೊಡ್ಡದೆಂಬುದು ಎಲ್ಲರಿಗೂ ಗೊತ್ತಾಗಿದೆ. ಆದರೆ ನನ್ನದು ತಿಳಿಯದೆ ಮಾಡಿದ ತಪ್ಪು. ಆದರೆ ನೀವು ನಿಜವಾಗಿ ತಪ್ಪುಮಾಡುತ್ತಿದ್ದೀರಿ, ನಾನು ಈಗಲೇ ಹೇಳುತ್ತೇನೆ. ಇಂದು ನಾಳೆಯೇ ! ಇನ್ನು ನಾಲ್ಕು ದಿನಗಳೇಕೆ! ಈ ಜನ್ಮ ಮುಂದಿನ ಜನ್ಮದಲ್ಲಿಯೂ ಕೂಡ ನೀವು ಮುಟ್ಟಿದುದನ್ನು ತಿನ್ನುವುದಿಲ್ಲ! ನನಗೆ ಅಪ್ಪಣೆ ಕೊಡಿರಿ, ನಾನು ಹೋಗುತ್ತೇನೆ. ನಿಮ್ಮ ಉಸುರಿನಿಂದಲೇ ನನ್ನ ರಕ್ತ ಒಣಗಿಹೋಗುತ್ತಿದೆ."

ಮಧ್ಯಪಾನದಿಂದ ಮೈಮರೆತಿದ್ದ ಮನುಷ್ಯನೂ ಕೂಡ ಸತ್ಯನ ಮುಖದಲ್ಲಿ ರೂಪುಗೊಂಡ ತಿರಸ್ಕಾರ ಭಾವವನ್ನು ಮನಗಂಡ. ಸ್ವಲ್ಪ ಚೇತರಿಸಿಕೊಂಡು ಕುಡಿಯುತ್ತಲೇ ತಡವರಿಸುತ್ತಾ "ಚಂಚಲಾದೇವಿ! ಇದು ಕಿವುಡನ ಮುಂದೆ ಕಿನ್ನರಿ ಬಾರಿಸಿದಂತಿದೆ. ಹೋಗಲಿ ಬಿಡಿ, ಇವನು ನಮ್ಮ ಸಂತೋಷಗಳನ್ನೆಲ್ಲಾ ಮಣ್ಣುಗೂಡಿಸಿದ'' ಎಂದು ತೊದಲಿದ.

ಚಂಚಲೆ ಯಾವ ಉತ್ತರವನ್ನೂ ಕೊಡಲಿಲ್ಲ. ಸತ್ಯನ ಮುಖವನ್ನೇ

ನೋಡುತ್ತಾ ಕಂಬದಂತೆ ನಿಂತಿದ್ದಳು. ನಿಜವಾಗಿಯೂ ಅವಳು ಬಹಳ ದೊಡ್ಡ ತಪ್ಪನ್ನು ಮಾಡಿದ್ದಳು. ಆದರೆ ದಾಕ್ಷಿಣ್ಯ ಸ್ವಭಾವದಿಂದ ಕೂಡಿ ಶಾಂತಮೂರ್ತಿಯಂತಿದ್ದ ಸತ್ಯೇಂದ್ರ ಇಂತು ಮಾತನಾಡಬಹುದೆಂದು ಅವಳು ಊಹಿಸಿಯೂ ಇರಲಿಲ್ಲ.

ಸತ್ಯ ಕುಳಿತಿದ್ದ ಆಸನ ಬಿಟ್ಟು ಎದ್ದ. ಚಂಚಲೆ ಕೋಮಲ ಸ್ವರದಲ್ಲಿ "ಇನ್ನು ಸ್ವಲ್ಪಹೊತ್ತು ಕುಳಿತುಕೋ'' ಎಂದಳು.

ಇದನ್ನು ಕೇಳಿದೊಡನೆಯೇ ಕುಡಿತದಲ್ಲಿ ತೊಡಗಿದ್ದ ವ್ಯಕ್ತಿ "ಓಹೋ! ಮೊದಲು ಮೊದಲು ಸ್ವಲ್ಪ ಗರ್ವ ತೋರಿಸ್ತಾನೆ. ಈಗ ಹೋಗಲಿ ಬಿಡು. ದಾರ ಸ್ವಲ್ಪ ಸಡಿಲ ಮಾಡು.'' ಎಂದು ಕೂಗಿಕೊಂಡ.

ಸತ್ಯೇಂದ್ರ ಕೋಣೆಯನ್ನು ಬಿಟ್ಟು ಹೊರಕ್ಕೆ ಬಂದ. ಚಂಚಲೆಯೂ ಅವನ ಹಿಂದೆಯೇ ಬಂದು ಅವನನ್ನು ತಡೆಗಟ್ಟುತ್ತಾ ದಾರಿಗೆ ಅಡ್ಡಳಾಗಿ ನಿಂತು ಮೆಲ್ಲಗೆ ಹೇಳಿದಳು. ''ಅವರೆಲ್ಲ ಇಲ್ಲದೆಹೋಗಿದ್ದರೆ ನಾನು ಕೈಮುಗಿದು 'ನನ್ನದು ದೊಡ್ಡ ಅಪರಾಧವಾಯಿತೆಂ'ದು ಆಗಲೇ ಕೇಳಿ ಕೊಳ್ಳುತ್ತಿದ್ದೆ.'' ಅಂಗಲಾಚಿ ಮೊರೆಯಿಡುವಂತಿತ್ತು ಅವಳ ದನಿ.

ಸತ್ಯ ಉತ್ತರ ಕೊಡಲಿಲ್ಲ; ಮುಖ ತಿರುಗಿಸಿಕೊಂಡ. "ಈ ಪಕ್ಕ ದಲ್ಲಿರುವ ಕೋಣೆ ನನ್ನ ಓದುವ ಕೋಣೆ, ಒಂದು ಬಾರಿ ಒಳಗೆ ಬಂದು ನೋಡು. ನಿನ್ನ ಕ್ಷಮೆ ಬೇಡುತ್ತೇನೆ."

"ಆಗುವುದಿಲ್ಲ'' ಎಂದು ಸತ್ಯ ಮೆಟ್ಟಿಲುಗಳನ್ನಿಳಿಯಲನುವಾದ. ಅವನನ್ನೇ ಹಿಂಬಾಲಿಸುತ್ತಾ ಚಂಚಲೆ ನೊಂದ ದನಿಯಲ್ಲಿ ಕೇಳಿದಳು. ''ನಾಳೆ ಬರುವೆಯಾ?"

"ಇಲ್ಲ."

"ಇನ್ನೆಂದೂ ಬರುವುದಿಲ್ಲವೇ?"

"ಇಲ್ಲ."

ದುಃಖದಿಂದ ಚಂಚಲೆಯ ಕಂಠ ಬಿಗಿಯಿತು. ಅಳುವನ್ನು ತಡೆದು ಹೇಳಿದಳು. "ಎಂದಿಗೂ ಇದಾಗದು. ಸಂಧಿಸಲೇಲಾರೆನೆಂದು ನಾನು ನಂಬಲಾರೆ....ಹೋಗಲಿ ನನ್ನ ಒಂದು ಮಾತನ್ನಾದರೂ ನಂಬುವೆಯಾ?"

ಅವಳ ಹೃದಯದಿಂದೆದ್ದ ಮೊರೆ ಸತ್ಯೇಂದ್ರನ ಹೃದಯ ಮುಟ್ಟಿತು. ಹದಿನೈದು ಹದಿನಾರು ದಿನಗಳಿಂದ ಚಂಚಲೆಯ ಅನೇಕ ಅಭಿನಯಗಳನ್ನು ಸತ್ಯೇಂದ್ರ ನೋಡಿದ್ದ. ಆದರೆ ಇಂದು ತನ್ನಮುಂದೆ ನಿಂತಿರುವ ಚಂಚಲೆಯಲ್ಲಿ ಸ್ವಲ್ಪವೂ ಅಭಿನಯವಿಲ್ಲವೆಂದು ತನ್ನಲ್ಲಿ ತಾನೇ ನಿಶ್ಚಯಿಸಿದ. ಆದರೂ ಮುಖ ತಿರುಗಿಸಿಕೊಂಡು ನಿಂತ. ಅವನ ಮುಖದಮೇಲೆ ಮೂಡಿದ ತಾತ್ಸಾರ ನೋಡಿ ಚಂಚಲೆಯ ಎದೆ ಒಡೆದು ನೀರಾಯಿತು. ಅಯ್ಯೋ ಪಾಪ! ಅವಳೇನು ಹೇಳಿದರೆ ತಾನೆ ಅವನಿಗೆ ನಂಬಿಕೆ ಹುಟ್ಟೀತು! ಸತ್ಯ ಕೇಳಿದ, "ನಿನ್ನ ಯಾವ ಮಾತಿನಲ್ಲಿ ವಿಶ್ವಾಸ ತೋರಲಿ?''

ಚಂಚಲೆಯ ತುಟಿಗಳದುರಿದವು. ಮಾತನಾಡುವ ಬಯಕೆ ಮಾತ್ರ ಬಲವಾಯ್ತು. ಆದರೆ ಮಾತುಗಳೇ ಹೊರಡದಾದವು. ಕಣ್ಣೀರಿನಿಂದ ಮಂಜಾದ ದೃಷ್ಟಿಯನ್ನು ಒಂದುಕ್ಷಣ ಮೇಲ್ಮಾಡಿ ಪುನಃ ನೆಲ ನೋಡಲಾರಂಭಿಸಿದಳು. ಸತ್ಯನೂ ಇದನ್ನು ನೋಡಿದ. "ಆದರೇನು! ಅಭಿನಯದಿಂದ ಕಣ್ಣೀರು ಬರಬಾರದೇಕೆ?" ಎಂದು ಅವನ ಎಚ್ಚೆತ್ತ ಮನಸ್ಸು ದನಿಗೂಡಿಸಿತು.

ಚಂಚಲೆ ತಲೆ ಎತ್ತದೆಯೇ ಸತ್ಯೇಂದ್ರ ಉತ್ತರಕ್ಕೆ ಕಾಯುತ್ತಿರುವನೆಂದು ತಿಳಿದಳು. ಆದರೆ ಎಷ್ಟು ಪ್ರಯತ್ನಪಟ್ಟರೂ ಮಾತುಗಳೇ ಹೊರಡಲಿಲ್ಲ. ಎಲ್ಲ ಮಾತನ್ನೂ ಅವಳ ಹೃದಯ ತನ್ನಲ್ಲೇ ಅಡಗಿಸಿಟ್ಟಿತ್ತು. ಪಾಪ! ಸತ್ಯೇಂದ್ರನಿಗೆ ಹೇಗೆತಾನೇ ಹೃದಯ ಬಿಚ್ಚಿ ತೋರಿಸಿಯಾಳು!

ಚಂಚಲ ತನ್ನ ಹೃದಯವನ್ನೇ ಸತ್ಯೇಂದ್ರನಿಗರ್ಪಿಸಿದ್ದಳು. ಅವನ ಪ್ರೀತಿಯ ಒಂದು ಕಣಕ್ಕೆ ತನ್ನೆಲ್ಲವನ್ನೂ ತ್ಯಾಗಮಾಡಲು ಸಿದ್ಧಳಿದ್ದಳು. ಆದರಿದನ್ನು ನಂಬುವವರಾರು? ಸಮಾಜದ ದೃಷ್ಟಿಯಲ್ಲಿ ಅವಳು ಅಪರಾಧಿನಿ, ಕಲಂಕಿನಿ. ಆ ಕೋಣೆಯ ಮೂಲೆ ಮೂಲೆಯೂ ಅವಳ ಅಪರಾಧಗಳಿಗೆ ತಾವೇ ತಾವಾಗಿ ಸಾಕ್ಷ್ಯ ಹೇಳುತ್ತಿದ್ದವು. "ಹಿಂದೆ ಎಷ್ಟೋ ಅಪರಾಧಗಳನ್ನು ಮಾಡಿದ್ದರೂ ಇಂದಿನಿಂದ ಮಾಡುವುದಿಲ್ಲ" ಎಂದು ಹೇಗೆ ತಾನೆ ವಿಚಾರಕನಂತೆ ಮುಂದೆ ನಿಂತಿದ್ದ ಸತ್ಯನಿಗೆ ಹೇಳಿಯಾಳು?

ಸತ್ಯನಿಗೆ ಹೆಚ್ಚುಕಾಲ ಕಾಯುವುದು ಅಸಹ್ಯವಾಗಿ ತೋರಿತು.

" ನಾನು ಹೊರಡುತ್ತೇನೆ " ಎಂದ.

ಚಂಚಲೆ ತಲೆಯೆತ್ತದೆಯೇ ಹೇಳಿದಳು.

" ಹೋಗು, ನಾನು ತಲೆಯಿಂದ ಕಾಲಿನವರೆಗೆ ಅಪರಾಧಗಳಲ್ಲಿ ಮುಳುಗಿದ್ದರೂ ಆತ್ಮ ಸಾಕ್ಷಿಯಾಗಿ ನಿನಗೆ ಸಮರ್ಪಿಸಿರುವ ಪ್ರೇಮಾರಾಧನೆಯನ್ನು ನಿರಾಕರಿಸಿ ಅಪರಾಧಿಯಾಗಬೇಡ. ಎಲ್ಲರ ಹೃದಯದಲ್ಲೂ ಭಗವಂತನಿರುವನೆಂಬುದನ್ನು ಮರೆಯಬೇಡ." ಸ್ವಲ್ಪ ತಡೆದು ಪುನಃ ಹೇಳಿದಳು. ಎಲ್ಲ ದೇವಸ್ಥಾನಗಳಲ್ಲೂ ಪೂಜೆ ನಡೆಯದಿರಬಹುದು, " ನಿಜ. ಆದರೆ ಗುಡಿಗಳಲ್ಲಿನ ದೇವರು ಮಾತ್ರ ಎಂದಿಗೂ ಪವಿತ್ರರೇ. ಅವರನ್ನು ನೋಡಿ ತಲೆ ತಗ್ಗಿಸದಿದ್ದರೆ ಹೋಗಲಿ, ಒದ್ದುಕೊಂಡು ಹೋಗುವುದಂತೂ ಎಂದಿಗೂ ಒಳಿತಲ್ಲ." ಮಾತು ಮುಗಿಸಿ ಎಚ್ಚೆತ್ತಾಗ ಸತ್ಯೇಂದ್ರ ಸದ್ದಿಲ್ಲದೆ ಮೆಲ್ಲ ಮೆಲ್ಲನೆ ಹೊರಡುತ್ತಿದ್ದುದನ್ನು ಚಂಚಲ ನೋಡಿದಳು.

ಸ್ವಭಾವಕ್ಕೆ ವಿರೋಧವಾಗಿ ದ್ರೋಹವನ್ನೆಸಗಬಹುದು. ಆದರೆ ಸ್ವಭಾವವನ್ನಳಿಸಲಸಾಧ್ಯ. ಸನ್ನಿವೇಶಗಳ ಪರಂಪರೆಯಲ್ಲಿ ಸಿಕ್ಕಿಬಿದ್ದ ಹೆಂಗಸು ಅನೇಕ ಅತ್ಯಾಚಾರಗಳನ್ನು ಮಾಡಬಹುದು. ಆದರೆ ಅವಳಲ್ಲಿ ಹೆಂಗರಳಿಲ್ಲವೆ? ಚಂಚಲೆ ವೇಶ್ಯೆ, ನಿಜ, ಆದರೂ ಹೆಂಗಸು! ಹುಟ್ಟಿದಾಗಿನಿಂದ ಸಾವಿರಾರು ಅಪರಾಧಗಳನ್ನು ಮಾಡಿ ಅಪರಾಧಿನೀ ಎನಿಸಿಕೊಂಡಾಗ್ಯೂ ಅವಳು ಹೆಂಗಸೇ.

ಸುಮಾರು ಒಂದು ಘಂಟೆಯನಂತರ ಚಂಚಲೆ ತನ್ನ ಕೋಣೆಗೆ ವಾಪಸು ಬಂದಳು. ಅವಳ ಬೂದಿ ಮುಚ್ಚಿದ ಕೆಂಡದಂತಿದ್ದ ನಾರಿತ್ವ ಆಗ ತಾನೇ ಮಿಂಚಿಹೋದ ಪ್ರಸಂಗದ ಅಮೃತ ಸ್ಪರ್ಶದಿಂದ ಸಜೀವವಾಯಿತು. ವಿಚಾರ ಪರಂಪರೆಯಿಂದ ಅವಳ ಮುಖದಲ್ಲಿ ಮಿಡಿದ ಹೊಸದೊಂದು ಭಾವವನ್ನು ಮಿತಿಮೀರಿ ಕುಡಿಯುತ್ತಿದ್ದವನೂ ಕೂಡ ಮನಗಂಡ.

ಅವನು ಕುಡಿಯುತ್ತಲೇ ಬಾಯಿಬಿಟ್ಟು ಕೇಳಿದ. " ಏಕೆ! ನಿಮ್ಮ ಕಣ್ಣು ಒದ್ದೆಯಾಗಿದೆಯಲ್ಲಾ?........ಅಬ್ಬ ಆ ಹುಡುಗ ಎಂತಹ ಹಠ ಸ್ವಭಾವದವನು. ಇಂತಹ ಅಮೂಲ್ಯವಸ್ತುವಿನ ರುಚಿಯನ್ನೂ ಸಹ ತಿರಸ್ಕರಿಸಿ ಹೊರಟು ಹೋದನಲ್ಲಾ ! ಹು....ಹೋಗಲಿ....ಸ್ವಲ್ಪ ಮಧುವನ್ನು ಕೊಡು"

ಮಾತು ಮುಗಿಸಿದವನೇ ಚಂಚಲೆ ತನ್ನ ಕಡೆ ತಿರುಗಿ ಸಹ ನೋಡಲಿಲ್ಲ ವೆಂಬುದನ್ನು ತಿಳಿದು ತಾನೇ ಮಧುವಿನ ಪಾತ್ರೆಯನ್ನು ತೆಗೆದುಕೊಂಡು ಮೇಲೆ ಮೇಲೆ ಕುಡಿಯುಹತ್ತಿದ.

ಅವನ ಒಂದು ಮಾತೂ ಚಂಚಲೆಯ ಕಿವಿಗೆ ಬೀಳಲಿಲ್ಲ. ಅಕಸ್ಮಾತ್ತಾಗಿ ಚಂಚಲೆಯ ದೃಷ್ಟಿ ಅವಳ ಕಾಲಿನಲ್ಲಿದ್ದ ಗೆಜ್ಜೆಯ ಕಡೆಗೆ ಹರಿಯಿತು. ನೆಟ್ಟದೃಷ್ಟಿಯಿಂದ ಅದನ್ನೇ ನೋಡುತ್ತಾ ನಿಂತಳು. ನೋಡುತ್ತಾನೋಡುತ್ತಾ ಅವಳ ಮುಖ ಬಾಡಿತು; ಬೆವರಿತು. ಕಣ್ಣಿನಲ್ಲಿ ಹನಿಗೂಡಿತು. ಗೆಜ್ಜೆಗಳ ಒಂದೊಂದು ಮುಖವೂ ಕೊಂಡಿಯನ್ನೆತ್ತಿಕೊಂಡಿರುವ ಒಂದೊಂದು ಚೇಳಿನಂತೆ ಅವಳಿಗೆ ಭಾಸವಾಯಿತು. ಆ ಕ್ಷಣವೇ ಗೆಜ್ಜೆಯನ್ನು ಬಿಚ್ಚಿ ಎಸೆದು ಬಿಟ್ಟಳು.

ಕುಳಿತಿದ್ದವರ ಪೈಕಿ ಒಬ್ಬ ಕೇಳಿದ. " ಇದೇನು! ಗೆಜ್ಜೆಯನ್ನೇ ಬಿಚ್ಚಿ ಬಿಟ್ಟೆಯಲ್ಲಾ !"

ತಲೆಯೆತ್ತಿ ಚಂಚಲೆ ಒತ್ತಿ ಹೇಳಿದಳು. " ಹೌದು, ಇನ್ನಾವಾಗಲೂ ಇವುಗಳನ್ನು ನಾನು ಕಟ್ಟುವುದಿಲ್ಲ."

" ಹಾಗೆಂದರೆ ? "

" ಹಾಗೆಂದರೆ ಹಾಗೆ, ನಿಮ್ಮ ಚಂಚಲಾಸಾನಿ ಸತ್ತುಹೋದಳು."

ಕುಡುಕ ಮಿಠಾಯಿಯನ್ನು ತಿನ್ನುತ್ತಿದ್ದ. ಚಂಚಲೆಯ ಮಾತು ಕೇಳಿದವನೆ ಬೆರಗಾಗಿ ಕೇಳಿದ " ಯಾವ ರೋಗದಿಂದ?" ಎಂದು.

ಚಂಚಲೆ ನೀರಸ ನಗೆಯೊಂದನ್ನಾಶ್ರಯಿಸಿ ಭಾವಪೂರಿತ ದನಿಯಲ್ಲಿ ಹೇಳಿದಳು: " ದೀಪವು ಹಚ್ಚಿಸಿದೊಡನೆಯೇ ಕತ್ತಲೆಯನ್ನು ಯಾವ ರೋಗ ಕಾಡುವುದೊ........ಸೂರ್ಯನು ಹುಟ್ಟಿದೊಡನೆಯೇ ರಾತ್ರಿ ಹೇಗೆ ಯಾವ ರೋಗದಿಂದ ನಶಿಸುವುದೋ? ಅದೇ ರೋಗದಿಂದ........ಇವತ್ತು ನಿಮ್ಮ ಚಂಚಲೆ ಸತ್ತುಹೋದಳು."

೬

ನಾಲ್ಕು ವರ್ಷಗಳ ನಂತರ ಕಲಕತ್ತೆಯ ಸೊಗಸು ಬಂಗಲೆಯೊಂದ ರಲ್ಲಿ ದೊಡ್ಡ ಜಮೀನುದಾರನ ಮಗನ ಅನ್ನಪ್ರಾಶನ ಸಮಾರಂಭ ಅತ್ಯಂತ ಸಡಗರದಿಂದ ನಡೆಯುತ್ತಿತ್ತು. ಭೋಜನದ ಆಯೋಜನ ಆಗತಾನೆ ಮುಗಿ ದಿತ್ತು. ಸಾಯಂಕಾಲದ ಮೇಲೆ ಅಂಗಳದಲ್ಲಿ ಸಜ್ಜುಗೊಳಿಸಿದ್ದ ಮಂಟಪ ದಲ್ಲಿ ಆರತಿ ಅಕ್ಷತೆಗಳಾಗಬೇಕಾಗಿತ್ತು. ಜಮೀನುದಾರರಿಗೆ ಸಲ್ಲುವಂತೆ ಅಲ್ಲಿ ಜನಮೆಚ್ಚಿನ ಅಚ್ಚುಕಟ್ಟಿತ್ತು. ಮನ ಮುಟ್ಟುವ ಸಂಗೀತ ನರ್ತನ ಗಳು ಸಂಜೆಗೆ ಮೀಸಲಾಗಿತ್ತು.

ಒಂದೆಡೆ ನರ್ತನ ಮಾಡಲಿದ್ದ ಮೂರು ನಾಲ್ಕು ನರ್ತಕಿಯರ ಗುಂಪಿತ್ತು. ಎರಡನೆ ಅಂತಸ್ಥಿನ ವರಾಂಡದಲ್ಲಿ ಪರದೆಯ ಹಿಂಭಾಗದಲ್ಲಿ ರಾಧಾರಾನಿ ಒಬ್ಬಳೇ ಕುಳಿತು ಕೆಳಗೆ ಬಂದು ಹೋಗುವವರನ್ನು ನೋಡು ತ್ತಿದ್ದಳು. ಆಮಂತ್ರಿತ ಭದ್ರಮಹಿಳೆಯರ ಶುಭಾಗಮನ ಇನ್ನೂ ಆಗಿರಲಿಲ್ಲ.

ಹಿಂದಿನಿಂದ ಮೆಲ್ಲಗೆ ಬಂದು ಸತ್ಯೇಂದ್ರ ಕೇಳಿದ “ಇಷ್ಟು ಮನ ಸ್ಸಿಟ್ಟು ಏನನ್ನು ನೋಡುತ್ತಿರುವೆ ರಾನಿ?” ಸತ್ಯೇಂದ್ರನ ಮುಖ ನೋಡಿ ನಗುತ್ತಾ ರಾಧಾರಾನಿ ಹೇಳಿದಳು. “ಎಲ್ಲರಂತೆ ನಾನೂ ಅಲ್ಲಿ ಕುಳಿತಿರುವ ನರ್ತಕಿಯರ ಹಾವಭಾವಗಳನ್ನು ನೋಡುತ್ತಿದ್ದೇನೆ. ಹೋಗಲಿ ನೀವೇಕೆ ಇಲ್ಲಿಗೆ ಬಂದಿರಿ?”

“ನೀನು ಒಬ್ಬಳೆ ಇದ್ದಹಾಗಿತ್ತು....ಸ್ವಲ್ಪ ಮಾತನಾಡೋಣವೆಂದು.”

“ಹೋಗಿ....ನೀವು ಯಾವಾಗಲೂ ಹೀಗೇ.”

“ನಿಜವಾಗಿಯೂ ರಾನಿ! ಕೋಪವೇಕೆ! ಹೋಗಲಿ, ಅಲ್ಲಿ ಕುಳಿತಿರು ವವರ ಪೈಕಿ ನಿನ್ನ ಮೆಚ್ಚಿನ ನರ್ತಕಿ ಯಾರು?”

ರಾಧಾರಾನಿ “ಅವಳು” ಎಂದು ತನ್ನ ಬೆರಳಿನಿಂದ ಆಡಂಬರವಿಲ್ಲದ ಸಾಮಾನ್ಯ ಉಡುಪನ್ನು ಧರಿಸಿ ಎಲ್ಲರಿಗಿಂತಲೂ ಹಿಂದೆ ಕುಳಿತಿದ್ದ ಸಹಜ ರೂಪಸಿಯಾದ ನರ್ತಕಿಯನ್ನು ತೋರಿಸಿದಳು. “ಹುಂ, ಇವಳೇನು ಚೆನ್ನು ಕ್ಷಯರೋಗಿಯಂತೆ ತೆಳ್ಳಗೆ ಕಡ್ಡಿಯಂತಿದ್ದಾಳೆ.”

“ನಿಮಗೇನು ಗೊತ್ತಾಗುತ್ತೆ ಪಾಪ! ಅವಳು ಸ್ವಾಭಾವಿಕ ಸುಂದರಿ,

ಸಹಜ ರೂಪಸಿ. ಬಡವಳೆಂದು ತೋರುತ್ತದೆ. ಹುಡುಕಿದರೂ ಅವಳ ಮೈಮೇಲೆ ಒಂದು ಆಭರಣವಿಲ್ಲ.

ಸತ್ಯೇಂದ್ರ ತಲೆಯಲ್ಲಾಡಿಸುತ್ತಾ "ಇರಬಹುದು ಇವರಿಗೆ ಒಬ್ಬೊಬ್ಬರಿಗೆ ಎಷ್ಟು ರೂಪಾಯಿ ಕೊಡಬೇಕು?" ನಿನಗೆ ಗೊತ್ತೇನು?

"ಇಲ್ಲ."

ಸತ್ಯೇಂದ್ರ ಬೆರಳಿನಿಂದ ತೋರಿಸುತ್ತಾ ಹೇಳಿದ. "ಇಲ್ಲಿ ಕುಳಿತಿರುವ ಇಬ್ಬರಿಗೆ ಮುವತ್ತು ರೂಪಾಯಿಗಳು, ಅವಳಿಗೆ ಐವತ್ತು, ನೀನು ಎಲ್ಲರಿಗಿಂತಲೂ ದರಿದ್ರಳೆಂದು ತಿಳಿದಿರುವಳಿಗೆ ಇನ್ನೂರು ರೂಪಾಯಿ." ಸತ್ಯೇಂದ್ರನ ಮುಖದಲ್ಲಿ ಸುಳಿದ ಭಾವದಲ್ಲಿ ತುಂಟತನವಿತ್ತು.

ರಾನಿ ಆಶ್ಚರ್ಯದಿಂದ ಹೇಳಿದಳು. "ಅಬ್ಬ! ಇನ್ನೂರು ರೂಪಾಯಿ ಏಕೆ ಬಹಳ ಚೆನ್ನಾಗಿ ನರ್ತಿಸುತ್ತಾಳೇನು? ಅಥವಾ ಹಾಡುತ್ತಾಳೋ?"

"ಅವಳು ಹಾಡಿರುವುದನ್ನು ಕೇಳಿಲ್ಲ. ಆದರೆ ಐದಾರು ವರ್ಷಗಳ ಹಿಂದೆ ಬಹಳ ಚೆನ್ನಾಗಿ ಹಾಡುತ್ತಿದ್ದಳೆಂದು ಕೇಳಿದವರು ಹೇಳುತ್ತಾರೆ. ಈಗಲೂ ಹಾಗೇ ಹಾಡುತ್ತಾಳೆಂಬ ನಂಬಿಕೆ ಏನು!"

"ಮತ್ತೆ ಅಷ್ಟು ರೂಪಾಯಿ ಕೊಟ್ಟು ಅವಳನ್ನೇಕೆ ಕರೆಸಿದಿರಿ?"

"ಅದಕ್ಕೆ ಕಮ್ಮಿ ಆವಳು ಬರುತ್ತಲೇ ಇರಲಿಲ್ಲ. ಅಷ್ಟು ಕೊಟ್ಟರೂ ಬರಲು ಮೊದಲು ಅವಳು ಒಪ್ಪಲಿಲ್ಲ. ಬಹಳ ಬಲವಂತಮಾಡಿದ ಮೇಲೆ ಒಪ್ಪಿದಳು."

ರಾನಿಗೆ ಇನ್ನೂ ಆಶ್ಚರ್ಯವಾಯಿತು "ರೂಪಾಯಿಗಳನ್ನು ಕೊಟ್ಟ ಮೇಲೂ ಬಲವಂತವೇನು ಬಂತು?" ಎಂದಳು.

ಹತ್ತಿರವಿದ್ದ ಕುರ್ಚಿಯೊಂದರ ಮೇಲೆ ಕುಳಿತುಕೊಳ್ಳುತ್ತಾ ಸತ್ಯೇಂದ್ರ ಹೇಳಿದ "ಅವಳು ಒಪ್ಪದಿರಲು ಎರಡು ಕಾರಣಗಳಿವೆ. ಈಚೆಗೆ ಅವಳು ಈ ವೃತ್ತಿಯನ್ನು ಬಿಟ್ಟುಬಿಟ್ಟಿದ್ದಾಳೆ. ಮತ್ತೊಂದು ಕಾರಣವೆಂದರೆ ಅವಳ ಕಲಾನಿರ್ವಹಣ ಸೊಂಪಾಗಿದ್ದರೂ ಒಟ್ಟಿಗೆ ಇನ್ನೂರು ರೂಪಾಯಿ ಕೊಡಲು ಜನ ಮುಂದೆ ಬರುವುದಿಲ್ಲ. ಅದಕ್ಕಾಗಿಯೇ ಅವಳಿಗೆ ಅಲ್ಲಿ ಇಲ್ಲಿ ಹೋಗುವ ಪ್ರಸಂಗ ಬರುವುದಿಲ್ಲ. ಇದೊಂದು ಅವಳ ಉಪಾಯ. 'ಬರವುದಿಲ್ಲವೆಂದರೆ

ಜನಗಳಿಗೆ ಕೋಪ ಬರುವುದು. ಅದಕ್ಕಾಗಿ ಹೆಚ್ಚು ಹಣ ಕೇಳಿದರೆ ಯಾರೂ ಕರೆಸಲೊಪ್ಪುವುದಿಲ್ಲ. ನನಗೂ ಕಷ್ಟತಪ್ಪುತ್ತದೆ' ಎಂದು ಅವಳು ತಿಳಿದು ಕೊಂಡಿದ್ದಾಳೆ. ಅವಳನ್ನು ಇಂದು ಬರಲು ಒಪ್ಪಿಸಲು ನನ್ನ ಸ್ವಾರ್ಥವೇ ಕಾರಣ."

ರಾನಿಗೆ ನಂಬಿಕೆ ಹುಟ್ಟಲಿಲ್ಲ. ಉತ್ಸುಕತೆಯಿಂದ ಮುಂದೆ ಜರುಗಿ ಬಂದು " ನಿಮ್ಮ ಸ್ವಾರ್ಥವೇನು ಮಣ್ಣು! ಹೋಗಲಿ, ಅವಳು ತನ್ನ ವೃತ್ತಿ ಯನ್ನೇಕೆ ಬಿಟ್ಟುಬಿಟ್ಟಳು! ಹೇಳಿ" ಎಂದಳು.

" ಕೇಳಲೇಬೇಕೇನು ?"

" ಹು, ಹೇಳಿ."

ಸ್ವಲ್ಪ ಹೊತ್ತು ಮೌನವಾಗಿದ್ದು ಸತ್ಯೇಂದ್ರ ಹೇಳಲಾರಂಭಿಸಿದ. " ಇವಳ ಹೆಸರು ಚಂಚಲೆ. ಯಾವಾಗಲೋ........ರಾನಿ! ಇಲ್ಲಿ ಯಾರಾ ದರೂ ಬಂದು ಬಿಡುತ್ತಾರೆ, ಒಳಗೆ ನಡೆ, ಎಲ್ಲವನ್ನೂ ಹೇಳುತ್ತೇನೆ.''

" ನಡೆಯಿರಿ ಹೋಗೋಣ '' ಎಂದು ಹೇಳುತ್ತಾ ರಾನಿ ಸತ್ಯೇಂದ್ರ ನನ್ನು ಕೋಣೆಯೊಳಕ್ಕೆ ಹಿಂಬಾಲಿಸಿದಳು.

ತನ್ನ ಪತಿಯ ಸಮೀಪದಲ್ಲಿ ಕುಳಿತು ಚಂಚಲೆಯ ಕಥೆಯೆಲ್ಲವನ್ನೂ ಕೇಳಿ ಸೆರಗಿನಿಂದ ತನ್ನ ಕಣ್ಣುಗಳನ್ನು ಒರೆಸಿಕೊಳ್ಳುತ್ತಾ " ಇಂದೇಕೆ ಆ ಹೆಣ್ಣು ಹೆಂಗಸನ್ನು ಅಪಮಾನಮಾಡಿ ಪ್ರತೀಕಾರ ಕೊಳ್ಳಬೇಕೆಂದಿರುವಿರಿ ? ಅಯ್ಯೋ! ನಿಮಗೇಕೆ ಈ ದುರ್ಬುದ್ಧಿ ಹುಟ್ಟಿತು ?'' ಎಂದಳು.

ಸತ್ಯೇಂದ್ರನ ಕಣ್ಣುಗಳಲ್ಲೂ ಸಹ ಹನಿಗೂಡಿತ್ತು. ಅವಳ ಕಥೆ ಹೇಳು ವಾಗ ಎಷ್ಟೋ ಬಾರಿ ಅವನ ಕಂಠ ಬಿಗಿದು ಬಂದಿತ್ತು. " ಅಪಮಾನವೇನೋ ಹೌದು, ಆದರೆ ನಮ್ಮ ಮೂವರನ್ನು ಬಿಟ್ಟು ಇದು ಇನ್ಯಾರಿಗೂ ತಿಳಿಯು ವುದಿಲ್ಲ. ಇನ್ಯಾರಿಗೂ ಈ ವಿಷಯ ಗೊತ್ತಿಲ್ಲ'' ಎಂದ.

ರಾನಿ ಏನೂ ಉತ್ತರಕೊಡಲಿಲ್ಲ. ಮತ್ತೊಂದು ಬಾರಿ ಸೆರಗಿನಿಂದ ತನ್ನ ಕಣ್ಣುಗಳನ್ನು ಒರೆಸಿಕೊಂಡು ತುಂಬು ದುಃಖದಿಂದ ಹೊರಹೊರಟಳು.

ಕೆಳಗಡೆ ಮಂಟಪ ಅತಿಥಿಗಳಿಂದ ತುಂಬಿಹೋಗಿತ್ತು. ಹಾಗೆಯೇ ಮೇಲಿನ ಮಹಡಿಯ ಅಂಗಣವೂ ತುಂಬಿತ್ತು. ಸ್ತ್ರೀಯರ ಕೋಮಲ ದನಿ

ಪರದೆಯನ್ನು ಭೇದಿಸಿಕೊಂಡು ಬಂಗಲೆಯನ್ನೆಲ್ಲಾ ತುಂಬಿತ್ತು. ನರ್ತಕಿಯರೆಲ್ಲರೂ ನರ್ತನಕ್ಕಾಗಿ ಸಿದ್ಧರಾಗುತ್ತಿದ್ದರು. ಚಂಚಲೆ ಮಾತ್ರ ತಲೆ ತಗ್ಗಿಸಿಕೊಂಡು ಮೌನವಾಗಿ ಕುಳಿತಿದ್ದಳು. ಅವಳ ಕಣ್ಣುಗಳಿಂದ ನೀರು ಧಾರೆ ಧಾರೆಯಾಗಿ ಸುರಿಯುತ್ತಿತ್ತು. ಅವಳಿಗಿದ್ದ ದುಡ್ಡು ಕಾಸು ಈ ಐದು ವರ್ಷಗಳಲ್ಲಿ ಕರಗಿಹೋಗಿದ್ದಿತು. ಅವಳ ಜೀವನದ ಪ್ರಶ್ನೆ ದಿನ ದಿನಕ್ಕೆ ಅವಳನ್ನು ಯೋಚನೆಗೀಡುಮಾಡಿತ್ತು. "ನನ್ನ ಜನ್ಮವಿರುವವರೆಗೆ ಆ ಹೇಸಿಗೆ ವೃತ್ತಿಯನ್ನು ಪುನಃ ಆಶ್ರಯಿಸುವುದಿಲ್ಲ"ವೆಂದು ಅವಳು ತನ್ನ ವೃತ್ತಿಗೆ ತಿಲಾಂಜಲಿಯಿತ್ತಿದ್ದಳು. 'ಆದರೆ ಅದನ್ನೇ ಆಶ್ರಯಿಸಬೇಕೋ ಏನೋ' ಎಂಬ ನಿಸ್ಸಹಾಯತೆಯ ಪರಮಾವಧಿಯಲ್ಲಿ ಈಗ ಸಿಕ್ಕಿದ್ದಳು. ತಲೆಯೆತ್ತಿ ನಿಲ್ಲುವಷ್ಟು ಶಕ್ತಿಯೂ ಸಹ ಅವಳಲ್ಲಿ ಉಳಿದಿರಲಿಲ್ಲ. "ಅಪರಿಚಿತ ಪುರುಷರ ದಾಹದೃಷ್ಟಿಯ ಹೊಡೆತಕ್ಕೆ ಸಿಕ್ಕಿ ನನ್ನ ಶರೀರ ಕಲ್ಲಾಗುವುದು, ನನ್ನ ಪಾದಗಳು ನರ್ತನಮಾಡಲಾರವು" ಎಂಬ ಊಹೆ ಕೂಡ ಎರಡು ಘಂಟೆಗಳ ಹಿಂದೆ ಅವಳ ಮನಸ್ಸಿನಲ್ಲಿ ಸುಳಿದಿರಲಿಲ್ಲ. "ನಾನು ಹಿಂದಿನಂತೆಯೇ ಪುರುಷರ ದೃಷ್ಟಿಗಳನ್ನು ಎದುರಿಸಿ ನರ್ತನ ಮಾಡಬಲ್ಲೆ"ನೆಂದು ತಿಳಿದಿದ್ದಳು. ಪಾಪ! ಅವಳ ದುಃಖ ಅವಳದೇ ಆಗಿತ್ತು.

"ತಮ್ಮನ್ನು ಕರೆಯುತ್ತಿದ್ದಾರೆ."

ಚಂಚಲೆ ಕಣ್ಣೆತ್ತಿ ನೋಡಿದಳು. ಹನ್ನೆರಡು ಹದಿಮೂರು ವರ್ಷದ ಹುಡುಗನೊಬ್ಬ ಎದುರು ನಿಂತಿದ್ದ. ಅವನು ಮಹಡಿಯ ಕಡೆ ಕೈ ತೋರಿ ಮತ್ತೊಂದಾವರ್ತಿ ಹೇಳಿದ "ಒಡತಿ ನಿಮ್ಮನ್ನು ಕರೆಯುತ್ತಿದ್ದಾರೆ."

ಚಂಚಲೆಗೆ ನಂಬಿಕೆ ಹುಟ್ಟಲಿಲ್ಲ. "ಯಾರು ಕರೆಯುತ್ತಿದ್ದಾರೆ?" ಎಂದಳು. ಮತ್ತೊಮ್ಮೆ ಅದೇ ಉತ್ತರ ಬಂತು.

"ಒಡತಿ"

"ನೀನು ಯಾರು?"

"ನಾನು ಸೇವಕ."

ಚಂಚಲೆ ತಲೆಯಲ್ಲಾಡಿಸುತ್ತಾ "ನನ್ನನ್ನು ಕರೆಯುತ್ತಿರಲಾರರು, ನೀನು ಇನ್ನೊಮ್ಮೆ ವಿಚಾರಿಸಿ ಬಾ" ಎಂದಳು.

ಹುಡುಗ ವಿಚಾರಿಸಿ ಬಂದು ಪುನಃ "ತಮ್ಮ ಹೆಸರು ಚಂಚಲಾದೇವಿ ಎಂದಲ್ಲವೇ? ತಮ್ಮನ್ನೇ ಕೂಗುತ್ತಿರುವರು. ನನ್ನೊಡನೆ ಬನ್ನಿ. ನಿಮಗಾಗಿ ಕಾಯುತ್ತಿರುವರು." ಎಂಬುದಾಗಿ ಹೇಳಿದ.

ಚಂಚಲೆ ತನ್ನ ಕಾಲಿನಲ್ಲಿದ್ದ ಗೆಜ್ಜೆಗಳನ್ನು ಬೇಗ ಬೇಗ ಬಿಚ್ಚಿ ಆ ಹುಡುಗನನ್ನು ಹಿಂಬಾಲಿಸಿ ಮೆಲ್ಲ ಮೆಲ್ಲನೆ ಮನೆಯೊಳಕ್ಕೆ ಹೋದಳು. ಒಡತಿ ತನ್ನ ನಚ್ಚಿನ ಹಾಡುಗಳನ್ನು ಹೇಳಿಸಲು ತನ್ನನ್ನು ಕರೆಸಿರಬಹು ದೆಂದು ಚಂಚಲೆ ಅಂದುಕೊಂಡು ನಡೆದಳು.

ಮಹಡಿಯ ಬಾಗಿಲಿನಲ್ಲಿಯೇ ರಾಧಾರಾನಿ ಮಗುವನ್ನೆತ್ತಿಕೊಂಡು ಚಂಚಲೆಗಾಗಿ ಕಾಯುತ್ತಾ ನಿಂತಿದ್ದಳು. ಚಂಚಲೆ ಸಂಕೋಚ ಗಾಬರಿ ಗಳಿಂದ ಮೆಲ್ಲಮೆಲ್ಲನೆ ಬಂದಳು.

ರಾಧಾರಾನಿ ಅವಳ ಕೈಗಳನ್ನು ಆದರದಿಂದ ಹಿಡಿದು ತನ್ನ ಕೋಣೆ ಯೊಳಕ್ಕೆ ಎಳೆದುಕೊಂಡು ಕರೆದೊಯ್ದಳು. ಬಲತ್ಕಾರವಾಗಿ ಚಂಚಲೆ ಯನ್ನು ಸೋಫಾದ ಮೇಲೆ ಕೂಡಿಸಿ ನಗುತ್ತಾ "ಅಕ್ಕಾ, ನನ್ನನ್ನು ಗುರ್ತಿ ಸುವೆಯಾ?" ಎಂದಳು. ಆಶ್ಚರ್ಯದಿಂದ ಚಂಚಲೆ ಮೂಕಳಾದಳು. ರಾನಿ ತನ್ನ ಕೊಂಕಳಲ್ಲಿದ್ದ ಮಗುವನ್ನು ತೋರಿಸುತ್ತಾ "ನಿನ್ನ ಚಿಕ್ಕತಂಗಿ ಯನ್ನು ಗುರ್ತಿಸದೇ ಹೋದೆ. ಆದರೆ ಇವನನ್ನೂ ನೀನು ಗುರ್ತಿಸದೇ ಹೋದರೆ ಬಹಳ ಜಗಳವಾಡಬೇಕಾದೀತು? ಹುಷಾರು" ಎಂದು ಹುಸಿನಕ್ಕಳು.

ರಾನಿಯ ನಗೆಯಿಂದ ಚಂಚಲೆ ಅವಾಕ್ಕಾದಳು. ಯಾವ ಮಾತೂ ಹೊರಡಲಿಲ್ಲ ಆದರೂ ಅವಳ ಅಂಧಕಾರ ಸ್ವಲ್ಪ ಸ್ವಲ್ಪ ದೂರ ಸರಿಯುತ್ತಾ ಬಂತು. ರಾನಿಯ ಮುಖವನ್ನು ಬಿಟ್ಟು ಆಗತಾನೆ ಅರಳಿದ ಗುಲಾಬಿಯ ಹೂವಿನಂತಿದ್ದ ಶಿಶುವಿನ ಮುಖದ ಕಡೆ ಚಂಚಲೆಯ ದೃಷ್ಟಿ ಹೊರಳಿತು. ನೆಟ್ಟದೃಷ್ಟಿಯಿಂದ ಮಗುವನ್ನು ನೋಡಿದಳು. ರಾನಿ ಮೌನವಾಗಿದ್ದಳು. ಬಹಳ ಹೊತ್ತು ಒಂದೇ ದೃಷ್ಟಿಯಿಂದ ಮಗುವನ್ನು ನೋಡುತ್ತಾ ಇದ್ದು

ಇದ್ದಕ್ಕಿದ್ದಂತೆ ಎದ್ದು ಎರಡು ಕೈಗಳನ್ನೂ ಚಾಚಿ ರಾನಿಯಿಂದ ಮಗುವನ್ನು ತೆಗೆದುಕೊಂಡು ಬಿಗಿದಪ್ಪಿ ಚಂಚಲೆ ಅಳಲಾರಂಭಿಸಿದಳು.

ರಾನಿ ಮೆಲ್ಲಗೆ "ಗುರ್ತಿಸಿದೆಯಾ ಅಕ್ಕಾ" ಎಂದಳು.

"ಹೌದು ತಂಗಿ, ಗುರ್ತು ಸಿಕ್ಕಿತು."

"ಸಹೋದರೀ, ಸಮುದ್ರವನ್ನು ಕಡೆದು ಅದರಿಂದ ಬಂದ ವಿಷವೆಲ್ಲವನ್ನೂ ನೀನು ಕುಡಿದು, ಅಮೃತವೆಲ್ಲವನ್ನೂ ನಿನ್ನ ಈ ತಂಗಿಗೆ ಕೊಟ್ಟುಬಿಟ್ಟೆ. ಅವರು ನಿನ್ನನ್ನು ಪ್ರೀತಿಸುತ್ತಿದ್ದರು. ಅದರಿಂದಲೇ ನಾನು ಅವರನ್ನು ಪಡೆದುದು."

ಚಂಚಲೆ ಸತ್ಯೇಂದ್ರನ ಚಿತ್ರವೊಂದನ್ನು ಕೈಯಲ್ಲಿ ಹಿಡಿದು ಒಂದೇ ಮನಸ್ಸಿನಿಂದ ನೋಡುತ್ತಿದ್ದಳು. ಕಣ್ಣೊತ್ತಿ ನಗುತ್ತಾ "**ವಿಷದ ವಿಷವೇ ಅಮೃತವಲ್ಲವೇ ತಂಗೀ!** ನಾನೂ ಸಹ ಅದರಿಂದ ವಂಚಿತಳಾಗಿಲ್ಲ. ಆ ವಿಷವೇ ಅಲ್ಲವೇ ಪಾಪಿಷ್ಠಳಾದ ನನ್ನನ್ನು ಪವಿತ್ರಳನ್ನಾಗಿ ಮಾಡಿದುದು?" ಎಂದಳು.

ರಾನಿಯು ಮೌನವೇ ಚಂಚಲೆಯು ಪ್ರಶ್ನೆಗೆ ಉತ್ತರ ಹೇಳಿತು. "ಅಕ್ಕಾ. ಅವರನ್ನು ಒಂದು ಬಾರಿ ನೋಡುವಿಯಾ?" ಕಣ್ಣು ಮುಚ್ಚಿ ಒಂದೆರಡು ನಿಮಿಷಗಳು ಮೌನವಾಗಿದ್ದು ಚಂಚಲೆ "ಇಲ್ಲ ತಂಗಿ, ನಾಲ್ಕು ವರ್ಷಗಳ ಹಿಂದೆ ನನ್ನನ್ನು ಪಾಪಿಷ್ಠಳೆಂದು ತಿಳಿದು ತಿರಸ್ಕಾರದಿಂದ ಮುಖ ತಿರುಗಿಸಿಕೊಂಡು ಬಂದ ದಿನ ಅವರನ್ನು ಕುರಿತು ನಾನು ಅಹಂಕಾರದಿಂದ 'ಒಂದಲ್ಲ ಒಂದು ದಿನ ನೀವು ನನ್ನಲ್ಲಿಗೆ ಬಂದೇ ಬರುವಿರಿ' ಎಂದೆ. ನನ್ನ ಅಹಂಕಾರ ನನ್ನಲ್ಲೇ ಉಳಿಯಿತು. ಅವರು ಬರಲೇ ಇಲ್ಲ. ಈಗ ನನಗೆ ಗೊತ್ತಾಗುತ್ತಿದೆ ಭಗವಂತನು ನನ್ನ ಅಹಂಕಾರವನ್ನೇಕೆ ನನಗೇ ತಿರುಗಿಸಿದನೆಂದು. ತಂಗೀ, ಭಗವಂತನು ನಮಗೆ ಪ್ರಿಯವಾದ ವಸ್ತುವನ್ನ ಪಹರಿಸಿ ಪುನಃ ಯಾವ ಬಗೆಯಲ್ಲಿ ವಾಪಸು ಕೊಡುತ್ತಾನೆಂಬುದನ್ನು ನನಗಿಂತಲೂ ಚೆನ್ನಾಗಿ ಇನ್ನ್ಯಾರೂ ತಿಳಿಯಲಾರರು." ಕಣ್ಣೀರನ್ನು ಸೆರಗಿನಿಂದ ಒರಸಿಕೊಂಡು ಚಂಚಲೆ ಪುನಃ ತುಂಬಿದ ದನಿಯಲ್ಲಿ ಹೇಳಿದಳು. "ಎಷ್ಟೋ ಬಾರಿ ನನ್ನ ಹೃದಯಾಗ್ನಿಯ ಬೇಗೆಯನ್ನು ಸಹಿಸಲಾರದೆ ದೇವರನ್ನು 'ನಿಷ್ಕರುಣಿ' 'ಕ್ರೂರಿ' ಎಂದು ನಿಂದಿಸಿದ್ದೇನೆ. ಆದರೆ ಪಾಪಿಷ್ಠಳಾದ

ನನ್ನ ಮೇಲೆ ದೇವರು ಎಷ್ಟು ದಯ ತೋರಿರುವನೆಂಬುದು ಇಂದು ನನಗೆ ತಿಳಿಯುತ್ತಿದೆ. ಆ ದಿನ ನನಗೆ ಸತ್ಯೇಂದ್ರನನ್ನು ದೇವರು ಕೊಟ್ಟು ಬಿಟ್ಟಿದ್ದರೆ ನಾನು ಎಲ್ಲ ದೃಷ್ಟಿಯಿಂದಲೂ ಪಾಪದಲ್ಲಿ ಮುಳುಗಿ ಹೋಗು ತ್ತಿದ್ದೆ. ಸತ್ಯೇಂದ್ರನೂ ನನಗೆ ಸಿಗುತ್ತಿರಲಿಲ್ಲ. ನನ್ನನ್ನು ಸಹ ಕಳೆದು ಕೊಳ್ಳುತ್ತಿದ್ದೆ."

ರಾನಿಯ ಹುಟ್ಟಿಲ್ಲ ಹೃದಯವಾಯಿತು. ಅವಳಿಂದ ಏನು ಹೇಳಲೂ ಆಗಲಿಲ್ಲ. ಪುನಃ ಚಂಚಲೆ ನೊಂದ ಹೃದಯದಿಂದ ಹೇಳಲಾರಂಭಿಸಿದಳು. "ಎಲ್ಲಿಯಾದರೂ ಸತ್ಯೇಂದ್ರನನ್ನು ಸಂಧಿಸಿದರೆ ಅವನ ಕಾಲು ಹಿಡಿದು 'ಕ್ಷಮಿಸು' ಎಂದು ಇನ್ನೊಮ್ಮೆ ಕೇಳಿಕೊಳ್ಳೋಣವೆಂದು ಯೋಚಿಸುತ್ತಿದ್ದೆ. ಆದರೆ ಈಗ ಅದರ ಅವಶ್ಯಕತೆ ಏನೂ ಇಲ್ಲ ತಂಗಿ. ನನಗಿನ್ನೇನೂ ಬೇಡ. ಅವರ ಈ ಚಿತ್ರಪಟ ಮಾತ್ರ ಕೊಟ್ಟು ಬಿಡು. ಇದಕ್ಕಿಂತಲೂ ಮಿಗಿಲಾಗಿ ನಾನು ಏನನ್ನೂ ಅಪೇಕ್ಷಿಸುವುದಿಲ್ಲ. ಏನಾದರು ಅಪೇಕ್ಷಿಸುವೆನಾದರೆ ದೇವರು ಅದನ್ನ ಸಹಿಸಲಾರನು; ಒಳ್ಳೆಯದು, ಇನ್ನು ನಾನು ಹೊರಡುತ್ತೇನೆ ತಂಗಿ" ಎಂದು ಎದ್ದು ನಿಂತಳು.

ರಾನಿ ಗದ್ಗದ ಸ್ವರದಿಂದ "ಇನ್ನಾವಾಗ ಬರುವೆ ಅಕ್ಕಾ" ಎಂದಳು.

"ಇಲ್ಲ, ಇನ್ನಾವಾಗಲೂ ನೀನು ನನ್ನನ್ನು ನೋಡಲಾರೆ ತಂಗಿ. ನನ್ನ ದೊಂದು ಸಣ್ಣ ಮನೆ ಇದೆ. ಅದನ್ನು ಆದಷ್ಟು ಬೇಗ ಮಾರಿ ಇಲ್ಲಿಂದ ಹೊರಟು ಹೋಗುತ್ತೇನೆ. ಆದರೆ ತಂಗಿ! ನನಗೆ ಒಂದು ವಿಷಯವನ್ನು ನಿಜವಾಗಿ ಹೇಳುವೆಯಾ? ಇಷ್ಟು ಅವಧಿಯ ನಂತರ ನನ್ನನ್ನು ಅವರೇಕೆ ಸ್ಮರಿಸಿದರು. ಅವರ ಆಳು ನನ್ನನ್ನು ಕರೆಯಲು ಬಂದಾಗ ಸುಳ್ಳು ಹೆಸ ರನ್ನೇಕೆ ಹೇಳಿದ?"

ನಾಚಿಕೆಯಿಂದ ರಾನಿಯ ಮುಖವೆಲ್ಲಾ ಕೆಂಪೇರಿತು. ತಲೆ ತಗ್ಗಿಸಿ ಮೌನವಾಗಿ ನಿಂತುಬಿಟ್ಟಳು. ಯಾವ ಉತ್ತರವನ್ನೂ ಹೇಳಲಿಲ್ಲ. ರಾನಿಯ ಮೌನದಲ್ಲೇ ಚಂಚಲ ಅವಳ ಪ್ರಶ್ನೆಗೆ ಉತ್ತರ ಕಂಡಳು. "ಗೊತ್ತಾ ಯಿತು. ನನ್ನನ್ನು ಅವಮಾನಗೊಳಿಸಬೇಕೆಂದಿದ್ದರಲ್ಲವೇ? ಇಲ್ಲದಿದ್ದರೆ ವಿಶ್ವಸಾಹಸ ಮಾಡಿ ನನ್ನನ್ನೇಕೆ ಕರೆಸಬೇಕಾಗಿತ್ತು?"

ರಾನಿ ಮುಖ ಮತ್ತಷ್ಟು ತಗ್ಗಿತು.

ಚಂಚಲೆಯೇ ನಗುತ್ತಾ "ತಂಗೀ, ನೀನು ನಾಚಿಕೊಳ್ಳುವ ಕಾರಣ ವೇನಿದೆ? ಆದರೆ ಇದರಲ್ಲಿ ಅವರ ತಪ್ಪೂ ಬಹಳವಿದೆ. ಅವರಿಗೆ ಹೇಳಿಬಿಡು. ನನ್ನನ್ನು ಎಂದೆಂದಿಗೂ ಅಪಮಾನ ಮಾಡಲಾರರೆಂದು. ನನ್ನಲ್ಲಿ 'ನನ್ನದು' ಎಂಬುದು ಯಾವುದೂ ಇಲ್ಲ. ಎಲ್ಲವನ್ನೂ ಅವರಿಗೆ ಕೊಟ್ಟುಬಿಟ್ಟದ್ದೇನೆ. ಅವರು ನನ್ನನ್ನು ಅಪಮಾನಗೊಳಿಸಿದರೆ ಅದು ಅವರಿಗಾಗುವ ಅಪಮಾನವೇ" ಎಂದು ನನ್ನ ಕೋಟಿ ನಮಸ್ಕಾರಗಳೊಡನೆ ತಿಳಿಸಿಬಿಡು ತಂಗಿ.

"ಒಳ್ಳೆಯದು, ಅಕ್ಕಾ" ಎಂದು ರಾನಿ ಕೈ ಜೋಡಿಸಿದಳು.

"ತಂಗಿ, ನಾನು ನಿನಗಿಂತ ವಯಸ್ಸಿನಲ್ಲಿ ದೊಡ್ಡವಳಾದರೂ ನಿನಗೆ ಆಶೀರ್ವಾದ ಮಾಡುವಷ್ಟು ಯೋಗ್ಯತೆ ನನಗಿಲ್ಲ. ಆದರೂ ದೇವರು ನಿನ್ನ ಸೌಮಾಂಗಲ್ಯವನ್ನು ಅಕ್ಷಯಗೊಳಿಸಲೆಂಬ ಪ್ರಾರ್ಥನೆ ಮಾತ್ರ ನನ್ನದು. ಹೋಗಿಬರುತ್ತೇನೆ, ತಂಗಿ" ಎಂದವಳೆ ಚಂಚಲೆ ದೊಡ್ಡ ಪ್ರಪಂಚದಲ್ಲಿ ಕಾಲಿಟ್ಟು ಕಣ್ಮರೆಯಾದಳು.

ಶ್ರೀ ಪರಿಮಳ ಪವರ್ ಪ್ರೆಸ್, ಡಿ. ಸುಬ್ಬಯ್ಯ ರೋಡು, ಮೈಸೂರು.

ಸದ್ಯದಲ್ಲೇ ಹೊರಬೀಳುವುದು

ಶರಚ್ಚಂದ್ರರ

'ಪಂಡಿತ್‌ಜೀ'

ವಿಚಾರಪೂರಿತ ನೀಳ್ಗಾದಂಬರಿ

★

ಈಗಾಗಲೇ ಪ್ರಕಟವಾಗಿದೆ!

ಹೇಮಾಂಗಿನಿ

ಶರಚ್ಚಂದ್ರರ ತುಂಬು ಕಲಾಪ್ರತಿಭೆಯನ್ನೆತ್ತಿ ಹಿಡಿದಿರುವ
ಕಿರುಕಾದಂಬರಿ.

ಬೆಲೆ: ೧—೦—೦

*SOLE DISTRIBUTORS:*

MURTHY AGENCIES
1498/1, KRISHNAMURTHIPURAM
MYSORE